

# ಚಿಕ್ಕಮಕ್ಕಳ ಚಿತ್ರಕಲೆ

ಬಿ. ಪಿ. ಬಾಯಿರಿ.



ಪ್ರಚಾರ ಪುಸ್ತಕಮಾಲೆ—೧೬೨.
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
೧೯೬೭

ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ-೧೬೨

# ಚಿಕ್ಕಮಕ್ಕಳ ಚಿತ್ರಕಲೆ

ಬಿ. ಪಿ. ಬಾಯಿರಿ



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೯

ಮೊದಲನೆಯ ಮುದ್ರಣ : ೧೯೬೯

೩,೦೦೦ ಪ್ರತಿಗಳು



ಸಾಧಾರಣ ಪ್ರತಿ: ೨೫ ಪೈಸೆ
ಉತ್ತಮ ಪ್ರತಿ: ೩೭ ಪೈಸೆ

ಪ್ರಕಾಶಕರು :
ಡೈರೆಕ್ಟರ್, ‘ ಪ್ರಸಾರಾಂಗ ’
ಮಾನಸ ಗಂಗೋತ್ರಿ, ಮೈಸೂರು-೬

ಮುದ್ರಕರು :
ರೋಹಿಣಿ ಪ್ರಿಂಟರ್ಸ್,
ಸರಸ್ವತೀಪುರಂ, ಮೈಸೂರು-೯

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚ ಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದರು. ಅವರ ಆಶಯ ಇಂದು ಫಲವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನು

ಉಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ನಮ್ಮ ಸಮಾಜ ದಲ್ಲಿನ ಭೇದ ಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾ ಡಿಸಿ ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆ ಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನಮನೆ ಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದು ತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾ ಯನ ವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತು ನೂರಅರವತ್ತೊಂದು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಬಿ. ಪಿ. ಬಾಯಿರಿಯವರ 'ಚಿಕ್ಕಮಕ್ಕಳ ಚಿತ್ರಕಲೆ' ಹೆಚ್ಚು ಜನಪ್ರಿಯ ವಾಗಲೆಂದು ನಾನು ಆಶಿಸುತ್ತೇನೆ.

ಕೆ. ಎಲ್. ಶ್ರೀಮಾಲಿ
ವೈಸ್-ಛಾನ್ಸಲರ್

# ಪೀಠಿಕೆ

'ಚಿಕ್ಕಮಕ್ಕಳ ಚಿತ್ರಕಲೆ' ಎಂಬ ಹೆಸರನ್ನು ನೋಡಿ 'ಇದು ಕಲಾಶಿಕ್ಷಕರಿಗೆ ಮತ್ತು ಚಿತ್ರಕಲಾ ವಿದ್ಯಾರ್ಥಿಗಳಿಗೆ ಅಗತ್ಯ, ನಮಗೆ ಬೇಕಾದುದಲ್ಲ' ಎಂದು ಭಾವಿಸಬೇಡಿರಿ. ಈ ಶಿಶುಚಿತ್ರ ಕಲೆಯು ಎಲ್ಲ ಮಕ್ಕಳ ರಕ್ಷಕರಿಗೂ, ಶಿಕ್ಷಕರಿಗೂ ತಿಳಿದಿರ ಬೇಕಾದ ವಿಚಾರವಾಗಿದೆ. ಏಕೆಂದರೆ ಈ ಕಲಾಶಿಕ್ಷಣವು ಮಕ್ಕ ಳನ್ನು ಕಲಾವಿದರನ್ನಾಗಿ ತರಬೇತುಗೊಳಿಸುವುದಕ್ಕೋಸ್ಕರ ಅಲ್ಲ. ಇದು ಮಗುವಿನ ಭಾವಾಭಿವ್ಯಕ್ತಿಗೆ, ಕಲ್ಪನಾಶಕ್ತಿಗೆ ಮತ್ತು ರಚನಾ ಸಾಮರ್ಥ್ಯಗಳ ಬೆಳವಣಿಗೆಗೆ ಅವಕಾಶ ನೀಡುತ್ತದೆ. ಅದರಿಂದ ಆತನು ಭವಿಷ್ಯ ಜೀವನದಲ್ಲಿ ಯಾವ ವೃತ್ತಿಯನ್ನೇ ಹಿಡಿಯಲಿ, ಅದರಲ್ಲಿ ತನ್ನದೇ ಆದ ರಚನಾ ವೈಶಿಷ್ಟ್ಯವನ್ನು ಬಳಸಿ ಅದನ್ನು ಹೆಚ್ಚು ಉತ್ತಮವಾಗಿ ನಿರ್ವಹಿಸಲು ಶಕ್ತನಾಗುವನು; ಇದಿರು ಬಂದ ಸಮಸ್ಯೆಗಳನ್ನು ಬಗೆಹರಿಸಬಲ್ಲ ಬುದ್ಧಿ ಕೌಶಲ್ಯವನ್ನು ಪಡೆ ಯುವನು. ಹೀಗೆ ಉತ್ತಮವಾದ ವ್ಯಕ್ತಿತ್ವವು ರೂಪುಗೊಳ್ಳಲು ಈ ಕಲಾರಚನೆಯು ನೆರವಾಗುತ್ತದೆ. ಇದು ತಜ್ಞರ ಸಿದ್ಧಾಂತ ವಾಗಿದೆ. ಇಂತಹ ಶಿಶುಚಿತ್ರಕಲಾಶಿಕ್ಷಣದ ಇತಿಹಾಸ, ವಿಧಾನ, ಉದ್ದೇಶ, ಉಪಯೋಗಗಳನ್ನು ತಿಳಿಸುವುದು ಈ ಪುಸ್ತಕದ ಗುರಿ ಯಾಗಿದೆ. ಇದನ್ನು ತಿಳಿದ ರಕ್ಷಕರು ಮಕ್ಕಳು ಮನೆಯಲ್ಲಿ ತಮ್ಮ ಭಾವಾಭಿವ್ಯಕ್ತಿಗೊಳಿಸುವ, ಕಲಾರಚನೆ ಮಾಡುತ್ತಿರುವ ಬಗ್ಗೆ ಆಕ್ಷೇಪಿಸಲಾರರು.

ಪ್ರಾಥಮಿಕ ಶಾಲೆಗಳ ಅಭ್ಯಾಸ ಪತ್ರಿಕೆಯಲ್ಲಿ ಶಿಶುಚಿತ್ರ ಕಲಾ ಶಿಕ್ಷಣವೂ ಸೇರಿದೆ. ವಿದ್ಯಾ ಇಲಾಖೆಯವರು ಹೊಸ ಪಾಠ ಪಟ್ಟಿ ಯನ್ನು ಆಚರಣೆಗೆ ತರುವಾಗ ಅಧ್ಯಾಪಕರಿಗಾಗಿ ಅಲ್ಲಲ್ಲಿ ವಿಚಾರ ಗೋಷ್ಠಿಗಳನ್ನು ಏರ್ಪಡಿಸಿದರು. ಅಲ್ಲಿ ಅನೇಕ ಕಡೆ ಈ ಕಲಾ ಪಾಠ ಕುರಿತು ಮಾತುಕತೆಗಾಗಿ ಆಮಂತ್ರಿತನಾದೆನು. ಅಲ್ಲಿ ವಿಚಾರ

ವಿನಿಮಯದಿಂದ ' ಚಿಕ್ಕಕ್ಕಮಕ್ಕಳ ಚಿತ್ರಕಲೆ ' ಯನ್ನು ಕುರಿತು ಪುಸ್ತಕವೊಂದು ಆವಶ್ಯಕ ಎಂಬ ಅನುಭವವಾಯಿತು ಮಕ್ಕಳ ಶಿಕ್ಷಕ ಹಾಗೂ ರಕ್ಷಕ ಮಿತ್ರರೊಡನೆ ಅಲ್ಲಲ್ಲಿ ನಡೆದ ಮಾತುಕತೆಗಳ ಸಾರಾಂಶವೇ ಈ ಪುಸ್ತಕದ ಒರೆಹವಾಗಿದೆ.

ಈ ಪುಸ್ತಕಕ್ಕೆ ಅಗತ್ಯವಾದ ಭಾವಚಿತ್ರಗಳನ್ನು ಡಿಲ್ಲಿಯ ' Childrens Book Trust ' ನವರು ಕೃಪೆಮಾಡಿ ಒದಗಿಸಿದ್ದಾರೆ. ಆ ಬಗ್ಗೆ ಅವರ ಉಪಕಾರಗಳನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಈ ಪುಸ್ತಕವನ್ನು ಪ್ರಕಟಗೊಳಿಸಿದ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದವರಿಗೂ, ಅಚ್ಚುಮಾಡಿದ ರೋಹಿಣಿ ಪ್ರಿಂಟರ್ಸ್, ಸರಸ್ವತಿಪುರಂ ಮೈಸೂರು-೯ ಇವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಚಿತ್ರ ಕುಟೀರ, ಉಡುಪಿ, ಬಿ. ಪಿ. ಬಾಯಿರಿ

೨೦-೬-೬೯

# ವಿಷಯಾನುಕ್ರಮಣಿಕೆ

# ಚಿಕ್ಕಮಕ್ಕಳ ಚಿತ್ರಕಲೆ

**ಪ್ರವೇಶ:**

ಚಿಕ್ಕಮಕ್ಕಳದ್ದೂ ಚಿತ್ರಕಲೆಯೇ ? ಅವರು ಕೂಡ ಚಿತ್ರ ರಚಿಸಬಲ್ಲರೆ ?

ಹೌದು, ಪ್ರತಿಮಗುವೂ ಒಬ್ಬ ಕಲಾವಿದ. ಚಿತ್ರಗಳು ಮಕ್ಕಳ ಭಾಷೆ. ಅವರಿಗೆ ಮೊದಲು ಬರುವುದು ಚಿತ್ರಕಲೆ; ಅನಂತರ ಬರಹ. ಚಿತ್ರಮಾಡುವುದಾದರೆ ಅವರಿಗೆ ಆನಂದ.

ಮಕ್ಕಳ ಚಿತ್ರಕಲೆ ಎಂದರೇನು ?

ಮಕ್ಕಳು ತಮಗೆ ಸಹಜಸ್ವಭಾವಾದ ಗುರುತುಗಳಿಂದ ತಮ್ಮ ಭಾವನೆಗಳನ್ನು ತೋಡಿಕೊಳ್ಳುವ ರಚನೆಯು ಮಕ್ಕಳಚಿತ್ರಕಲೆಯಾಗಿದೆ. ಅದನ್ನು ಮಕ್ಕಳು ಮಾತ್ರ ರಚಿಸಬಲ್ಲರು. ಅದರಲ್ಲಿ ಇತರರ ಪ್ರಭಾವ ಬಿದ್ದರೆ ಅದು ಚಿತ್ರಕಲೆಯಲ್ಲ. ಅದು ಆಗ ಕೃತಕ, ನಕಲಿ ಆಗುತ್ತದೆ.

ಚಿಕ್ಕಮಕ್ಕಳ ಚಿತ್ರಕಲೆಯ ವೈಶಿಷ್ಟ್ಯಗಳೇನು ? ಅದನ್ನು ಏಕೆ ಮೆಚ್ಚಬೇಕು ?

ಚಿಕ್ಕಮಕ್ಕಳು ಚಿತ್ರಗಳನ್ನು ಸುಲಭ ರೂಪಕ್ಕೆ ತಂದು ತೋರಿಸುತ್ತಾರೆ. ಈ ನಿಯಮವು ಎಲ್ಲಾ ಕಾಲದ ಮತ್ತು ಎಲ್ಲಾ ಜನಾಂಗಗಳ ಮಕ್ಕಳಲ್ಲೂ ತೋರುತ್ತದೆ. ಮಗುವಿನ ತೊಲ್ನುಡಿಯನ್ನು ನಾವು ಬಹಳವಾಗಿ ಇಷ್ಟಪಡುತ್ತೇವೆ. ಅದು ಎಲ್ಲರಿಗೂ ಅರ್ಥವಾಗದಿರಬಹುದು, ಹೆತ್ತವರಿಗೆ ಮಾತ್ರ ಅರ್ಥವಾಗಬಹುದು. ಅವರೂ ಅದನ್ನು ಮತ್ತಷ್ಟು ಆಡಲು ನಾವು ಉತ್ತೇಜನ ನೀಡುತ್ತೇವೆ. "ಚೀಂ ಪಾಚ ಬೋೕಕು" ಎಂದರೆ ಸಿಹಿ ಪಾಯಸ ಕೇಳುತ್ತಾನೆಂದು ಅರ್ಥಮಾಡಿ ಹರುಷಗೊಳ್ಳುತ್ತೇವೆ. ಶಿಶುಗಳನ್ನು

“ಹುಶ್ಯಾರ್ ಇಷ್ಟು ಕುಶಾಲು ಮಾಡುತ್ತೀಯ ?” ಎಂದು ಕೇಳುವುದಿಲ್ಲ. “ಹುಚ್ಚ್ಯಾರ್ ಇಟ್ಟು ಕುಚಾಲು ಮಾತೀಯಾ ?” ಎಂದು ಅವುಗಳಂತೆಯೇ ತೊದಲ್ನುಡಿ ಆಡುತ್ತೇವೆ. ಆ ಅಸ್ಪಷ್ಟ ಮಾತುಗಳಿಗಾಗಿ ಹಿಗ್ಗಿ ಹರುಷಗೊಳ್ಳುತ್ತೇವೆ. ಆ ಸಹೃದಯತೆಯನ್ನು ತ್ಯಜಿಸಿ ಏನನ್ನೋ ಗೊಜಗುಟ್ಟುತ್ತದೆಂದು ಗದರಿಸಬಹುದೇ ? ಹಾಗೆ ಮಾಡುವುದು ಹಾನಿಕರ. ಸ್ಪಷ್ಟ ಉಚ್ಚಾರವು ಆಮೇಲೆ ಬರುತ್ತದೆ. ಮಾತನಾಡುವುದು ಮೊದಲು, ಭಾಷಾ ನಿಯಮ, ವ್ಯಾಕರಣಾದಿಗಳನ್ನು ಕಲಿಯುವುದು ಅನಂತರ. ಮಕ್ಕಳ ಚಿತ್ರಕಲೆಯಲ್ಲೂ ಅದೇ ನೀತಿ. ಚಿತ್ರಗಳೆಂದರೆ ಮನದಲ್ಲಿ ಮೂಡಿದುದನ್ನು ಫಲಕಗಳ ಮೇಲೆ ಗುರುತಿಸುವುದು. ಹಾಗೆ ಭಾವ ಪ್ರದರ್ಶನ ಮಾಡಿ ಆತ್ಮತೃಪ್ತಿಪಟ್ಟು ಅವರು ಹಿಗ್ಗುತ್ತಾರೆ. ಅವುಗಳನ್ನು ಅರ್ಥಮಾಡಿಕೊಳ್ಳುವುದು ಹಿರಿಯರ ಕರ್ತವ್ಯ. ಆ ರಚನಾಸ್ಫೂರ್ತಿಯನ್ನು ಹತ್ತಿಕ್ಕಬಾರದು. ಚಿತ್ರಮಾಡುತ್ತಿದ್ದರೆ ಆತನೇನೋ ತಪ್ಪುಕೆಲಸ ಮಾಡುತ್ತಿದ್ದಾನೆಂದು ತಿಳಿಯಬಾರದು. ಆತನ ರಚನೆಯನ್ನು ಅರ್ಥಮಾಡಿ ಮೆಚ್ಚಲಾರದವರದ್ದೇ ತಪ್ಪು. ಅದಕ್ಕಾಗಿ ಗದರಿಸಿದರೆ ಅಂಥವರ ದೆಸೆಯಿಂದ ಮಗುವು ಭವಿಷ್ಯದಲ್ಲಿ ಯಾವ ಪ್ರಗತಿಪರ ರಚನಾಕಾರ್ಯಕ್ಕೂ ಮನಸ್ಸು ಹಾಕದ ಸ್ವಭಾವದವನಾಗಬಹುದು. ಚಿತ್ರರಚನೆಯ ದೆಸೆಯಿಂದ ಅದಕ್ಕೆ ಪ್ರೇರಕವಾದ ರಸಭಾವವು ಮಗುವಿನಲ್ಲಿ ಪುಷ್ಟಿಗೊಳ್ಳುತ್ತದೆ. ಆದುದರಿಂದ ಶಿಶುಚಿತ್ರಕಲೆಯು ಮಗುವಿನ ಮಾನಸಿಕ ಬೆಳವಣಿಗೆಗೆ ಸ್ವಾಭಾವಿಕ ಸಾಧನವಾಗಿದೆ.

ಮಗುವು ಚಿತ್ರಿಸುವಾಗ ತನ್ನದೇ ಆದ ಒಂದು ಮಾಯಾ ಪ್ರಪಂಚವನ್ನೇ ನಿರ್ಮಿಸುತ್ತದೆ. ಮುಖ್ಯಾಂಶಗಳನ್ನು ಗ್ರಹಿಸಿ ಅವುಗಳನ್ನು ನೇರವಾಗಿ ಚಿತ್ರಿಸುತ್ತದೆ. ಸಾದಾ ಸರಳ ಸಂಕೇತ

ಗಳಿಂದ ಚಿತ್ರಿಸಿ ಅಂತಃಸ್ಫುರಣ ಬಣ್ಣಗಳನ್ನು ಕೊಡುತ್ತದೆ. ಅದು ಯಾವುವೇ ಇತರ ಶೈಲಿ, ಸಂಪ್ರದಾಯ ಅಥವಾ ನಿಯಮಗಳಿಗೆ ಒಳಗಾದುದಲ್ಲ. ಮಗುವು ಚಿಕ್ಕದಾದಷ್ಟೂ ಆ ಗುಣಗಳು ಜಾಸ್ತಿ ಇರುತ್ತವೆ. ಯಾವ ಕಟ್ಟುಪಾಡಿಗೂ ಒಳಗಾಗದ ಈ ನೇರವಾದ ಅಂತಃಸ್ಫುರಣ ಗುಣದ ದೆಸೆಯಿಂದಲೇ ವಿದ್ಯಾತಜ್ಞರು ಮನಶ್ಶಾಸ್ತ್ರಜ್ಞರು ಮೊದಲಾದವರು ಶಿಶುಚಿತ್ರಗಳ ಕಡೆಗೆ ಆಕರ್ಷಿತರಾದರು. ಮಕ್ಕಳಲ್ಲಿರುವ ಈ ಅಮೂಲ್ಯ ಗುಣಗಳನ್ನು ಬೆಳೆಯಿಸಬೇಕು. ಹಿರಿಯರ ಹಸ್ತಕ್ಷೇಪದಿಂದ ಹಾಳಾಗದ ಹಸುಳೆಗಳ ಕೃತಿಗಳನ್ನು ಕಲಾಸೃಷ್ಟಿಯಿಂದ ಈಗ ಜಗತ್ತೇ ಮನ್ನಿಸುತ್ತಿದೆ. ಆದರೆ ಈಗಿನ ಮಕ್ಕಳು ಸುತ್ತಮುತ್ತಲಿನ ಪರಿಸ್ಥಿತಿ, ಎಲ್ಲೆಲ್ಲೂ ತೋರುವ ದೊಡ್ಡ ಚಿತ್ರಗಳ ದೆಸೆಯಿಂದ ಶಿಶುಚಿತ್ರಕಲಾತನವನ್ನು ಬೇಗನೆ ಕಳೆದುಕೊಂಡು ಶಿಶುಚಿತ್ರ ಕಲಾವಿದನೆಂಬ ಕಾಲವೇ ಕಡಮೆಯಾಗುತ್ತಿದೆ.

ಹಿರಿಯರ ಹಸ್ತಕ್ಷೇಪಗಳಿಂದ ಮಕ್ಕಳು ವಯಸ್ಕರಂತೆ ಚಿತ್ರಿಸಿದರೆ ಅವರ ಆ ಕೃತಿಗಳು ನಿಸ್ತೇಜವಾಗುತ್ತವೆ. ಹಾಗೆಯೇ ವಯಸ್ಕರು ಮಕ್ಕಳಂತೆ ಚಿತ್ರ ರಚಿಸಲು ಯತ್ನಿಸಿದರೆ ಅದು ಕೂಡ ತೇಜೋಹೀನವಾಗುತ್ತದೆ. ಶಿಶುತನದ ಆತ್ಮಗಳಾದ ಸರಳ ಮನಸ್ಸು, ನಿಷ್ಕಪಟಸ್ವಭಾವ, ಚೇತನಗಳು ಇತರರಿಗೆ ಬರಲಾರವು. ಆದಿ ಮಾನವ ಚಿತ್ರಕಲೆಯನ್ನು ಅನುಕರಿಸಿ ಮಾಡಿದ ಎಷ್ಟೋ ನವ್ಯ ಚಿತ್ರಗಳು ಕೃತಿಯಾಗಿ ಕಾಣುತ್ತವೆ. ಮಾನವಲೋಕದ ಗುಣಕ್ಕಿಂತಲೂ ಹೆಚ್ಚಾಗಿ ದೇವತಾಂಶ ಗುಣವುಳ್ಳದೆಂದು ಹೇಳಿಸಿಕೊಳ್ಳುವ ಶಿಶುವು ಎಲ್ಲಾ ಕಾಲದಲ್ಲೂ ತುಸುತುಸುವಾಗಿ ವಯಸ್ಕರ ಪ್ರಪಂಚಕ್ಕೆ ಕಾಲಿಡುತ್ತದೆ.

ಮಕ್ಕಳ ಕೈಗೆ ಕುಂಚ ಅಥವಾ ಬಳಪ ದೊರೆತರೆ ಬಂಧಮುಕ್ತರ

ಪಡುವಂತೆ ಆನಂದ ಪಡುತ್ತಾರೆ, ಏಕೆ ? ಪ್ರತಿ ಮಗುವಿನಲ್ಲೂ ಆತ್ಮಾಭಿವ್ಯಕ್ತಿ ಎಂದರೆ ತನ್ನ ಭಾವನೆಗಳನ್ನು ತಿಳಿಯಪಡಿಸಲು ಸಹಜವಾದ ಆಸೆ ಇರುವುದೇ ಅದಕ್ಕೆ ಕಾರಣ.

ಒಂದು ಮುಖವನ್ನು ಚಿತ್ರಿಸಲು ಹೇಳಿದರೆ ಮಗುವು ಒಂದು ವೃತ್ತಮಾಡಿ ಅದರೊಳಗೆ ಕಣ್ಣು ಬಾಯಿಗಳನ್ನು ಗುರುತಿಸಿ ಬಿಡುತ್ತದೆ. ಆದರೆ ಒಬ್ಬ ಕುರುಡನನ್ನು ಚಿತ್ರಿಸಲು ಹೇಳಿದರೆ ಮಗುವು ಮೇಲೆ ಕೆಳಗೆ ನೋಡತೊಡಗುತ್ತದೆ. ಕೈ ಕಾಲು ಸರಿಯಾಗಿ ಇರುವವರನ್ನು ಸಾಮಾನ್ಯವಾಗಿ ನಿಂತುಕೊಂಡಿರುವಂತೆ ಚಿತ್ರಿಸುತ್ತದೆ, ಆದರೆ ಕಾಲಿಲ್ಲದ ಹೆಳವನನ್ನು ಚಿತ್ರಿಸಲೊಲ್ಲದು. ಆದಿಮಾನವ [Primitive] ನಂತೆ ಮಗುವು ಕೂಡ ತನ್ನ ಜ್ಞಾಪಕದಲ್ಲಿ ತುಂಬಿದುದನ್ನು ಚಿತ್ರಿಸುವುದರಲ್ಲಿ ಸಂತೋಷಪಡುತ್ತದೆ. ಆಗ ಮಗುವಿನಲ್ಲಿ ರಚನಶೀಲವೂ ಆತ್ಮವಿಶ್ವಾಸವೂ ಅಭಿವೃದ್ಧಿಯಾಗುತ್ತವೆ. ಹೀಗೆ ಶಿಶುಚಿತ್ರಕಲೆಯು ಮಗುವಿನ ಮನೋಲ್ಲಾಸ ಮತ್ತು ಶೈಕ್ಷಣಿಕ ಪ್ರಗತಿಗೆ ಕಾರಣವಾಗುತ್ತದೆ.

ಮಕ್ಕಳಿಗೆ ಕೌಶಲ, ಕಲಾತಂತ್ರ ಏನು ಗೊತ್ತು ? ಹಾಗೇನೂ ಅಲ್ಲದಿರುವುದನ್ನು ಕಲೆ ಎಂದು ಹೇಗೆ ಹೇಳುವುದು ?

ಕಲೆಯನ್ನು ಕುರಿತು ಹೇಳುವಾಗ ಒಂದು ವಿಶಿಷ್ಟ ರಚನೆಯಲ್ಲಿ ಹೀಗೆ ನಿಯಮಪಾಲನೆ, ಕೌಶಲ, ಕಲಾತಂತ್ರ ಇರುತ್ತವೆ ಎಂದು ತೋರಿಸುವುದೊಂದು ವಿಧಾನ, ಆದರೆ ಅಂತಹುದು ಮಾತ್ರ ಕಲೆ ಎಂಬ ಮಾತು ಸಲ್ಲದು. ಕಲೆಯಲ್ಲಿ ಕ್ರಮ, ನಿಯಮ, ತಂತ್ರಜ್ಞಾನಗಳಿಗೆ ತರುವಾಯದ ಪ್ರಾಮುಖ್ಯತೆ ನೀಡತಕ್ಕದ್ದು. ಒಬ್ಬನಲ್ಲಿ ಸೃಜನಾತ್ಮಕ ಪ್ರೇರಣೆ ಎಂದರೆ ಹೊಸ ರಚನೆ ಮಾಡುವ ಆತ್ಮಪ್ರೇರಣೆ ಇದ್ದರೆ ಅವನಲ್ಲಿ ಕಲಾತಂತ್ರಜ್ಞಾನದ ಕೊರತೆ ಇದ್ದರೂ ಅವನು ಕಲಾವಿದನು. ಹೃದಯದಲ್ಲಿ ಮೂಡಿದುದನ್ನು ತೋಡಿ

ಕೊಳ್ಳುವ ಕಾತರತೆಯೇ ಕಲಾರಚನೆಗೆ ಪ್ರೇರಕಶಕ್ತಿ. ಶಿಶುಚಿತ್ರ ಕಲೆಗೂ ಆಧುನಿಕ ಚಿತ್ರಕಲೆಗೂ ಮಹತ್ವದ ದೊರೆಯಲು ಇವೆ. ಕಾರಣ. ಶಿಶುಚಿತ್ರಗಳೆಂದರೆ ಮಕ್ಕಳ ಮನಸ್ಸಿನ ದಾಖಲೆಗಳಾ ಗಿವೆ. ಪಾವುಲ್ ಕ್ಲೀ, ಮ್ಯಾಟಿಸ್ಸೀ, ಪಿಕಾಸೋ ಮೊದಲಾದ ಆಧುನಿಕ ಕಲಾವಿದರೂ ಕೂಡ ಮಕ್ಕಳಂತೆ ಚಿತ್ರರಚನೆ ಮಾಡಲು ಆಶಿಸಿದರು.

ಮಕ್ಕಳ ಚಿತ್ರಕಲೆಯ ಮುಖ್ಯ ಲಕ್ಷಣಗಳಾವುವು ?

ಮಕ್ಕಳ ಚಿತ್ರಗಳಲ್ಲಿ ಅಂತಃಸ್ಫುರಣೆಯಿಂದ ಅಯತ್ನ ಪೂರ್ವಕ ವಾಗಿ ವಿಷಯಕ್ಕೆ ನೇರವಾಗಿ ಹೋಗುವ ಗುಣಗಳಿರುತ್ತವೆ. [Directness and Spontaniety] ಕಲಾತಂತ್ರವನ್ನು ನೋಡು ವುದಾದರೆ ಸುಲಭದ, ಸರಳವಾದ ರೇಖೆಗಳು ಆನಂದದ ಮತ್ತು ಶೋಭಾಯಮಾನ ವರ್ಣಗಳ ಪ್ರಯೋಗ; ಅವುಗಳನ್ನು ನಿರೂಪಿಸು ವುದರಲ್ಲಿ ಕಾವ್ಯ ಸೌಂದರ್ಯವು ಕಂಡುಬರುತ್ತವೆ.

ಮಗುವು ರಚಿಸುವ ಕೃತಿಯು ಪ್ರಕೃತಿಯ ಪ್ರತಿಬಿಂಬವಲ್ಲ. ಅದು ಆತನ ಕಲ್ಪನೆಗೆ ಕೊಟ್ಟ ರೂಪ. ಶಿಶುಚಿತ್ರಗಳಲ್ಲಿ ಕಲ್ಪನೆಯೇ ಪ್ರಧಾನವಾದುದು. ಚಿತ್ರವಸ್ತುವು ಸಂಕೇತ ಮಾತ್ರ. ಹಿರಿಯರು ಕೂಡ ಇತರರಿಗೆ ಅರುಹಲು ಗುರುತುಗಳನ್ನು ಉಪಯೋಗಿಸುವು ದಿಲ್ಲವೇ? ಶಿವಲಿಂಗವು ಈಶ್ವರನ ಯಥಾರೂಪವೇ? ಕಟ್ಟಡದ ತುದಿ ಯಲ್ಲಿ ಶಿಖರ, ಶಿಲುಬೆ ಅಥವಾ ಗುಮ್ಮಟ ಇರುವುದನ್ನು ನೋಡಿ ದೂರದಿಂದಲೇ ಅದು ದೇವಸ್ಥಾನ, ಅದು ಇಗರ್ಜಿ, ಅದು ಮಸೀದಿ ಅನ್ನುತ್ತೇವೆ. ಆ ಗುರುತಿಗೆ ಆ ಅರ್ಥವೆಂಬುದು ತಿಳು ವಳಿಕೆ. ಹಾಗೆಯೇ ಮಗುವಿನೊಡನೆ ತನ್ನ ಭಾವನೆಗಳನ್ನು ತಿಳಿಯ ಪಡಿಸಲು ಉಪಯೋಗಿಸುವ ಗುರುತುಗಳನ್ನು ನಾವು ಅರಿತು ಕೊಂಡು ಆ ಚಿತ್ರವನ್ನು ಓದಬೇಕು.

ಮಕ್ಕಳ ಚಿತ್ರಗಳಲ್ಲಿ ಏನೇನು ಕಾಣಬಹುದು ?

ಚಿತ್ರವಿಚಿತ್ರ ಕಲ್ಪನೆಗಳು, ಊಹೆಗಳು ಆಕಾರ ಮತ್ತು ವರ್ಣಗಳಲ್ಲಿ ಗೋಚರಿಸುತ್ತವೆ. ಉದ್ಯಾನದಲ್ಲಿರುವ ಹೂಗಳಂತೆ ಅವು ಮೋಹಕವಾಗಿರುತ್ತವೆ. ಹಿರಿಯ ಕಲಾವಿದ ಭಗವಂತನು ಸೃಷ್ಟಿಸಿದ ಈ ವಿಶಾಲ ಪ್ರಪಂಚದಲ್ಲಿ ಮಕ್ಕಳು ಚಿತ್ರಗಳಿಂದ ಕಿರಿಯ ಪ್ರಪಂಚವನ್ನೇ ನಿರ್ಮಾಣ ಮಾಡುತ್ತಾರೆ. ವೇಗವಾಗಿ ಚಿತ್ರಗಳನ್ನು ರಚಿಸುತ್ತಾರೆ, ನೋಡಿದರೆ ಆಶ್ಚರ್ಯವಾಗುತ್ತದೆ. ಚಿತ್ರಿಸುವಾಗ ಬಾಹ್ಯಪ್ರಪಂಚವನ್ನೇ ಮರೆಯುತ್ತಾರೆ. ಚಿತ್ರಿಸಲಾರದ, ಚಿತ್ರಿಸಲೊಲ್ಲೆ ಎನ್ನುವ ಚಿಕ್ಕಮಕ್ಕಳು ಯಾರೂ ಇಲ್ಲ.

ಮಗುವು ಏಕೆ ಚಿತ್ರಿಸುತ್ತದೆ ?

ಮಗುವಿನದ್ದು ಕುತೂಹಲ ಸ್ವಭಾವ. ಎಲ್ಲದರಲ್ಲೂ ಆಸಕ್ತಿ, ಎಲ್ಲವನ್ನೂ ಅರಿಯುವ ಆತುರ. ಪರಿಶೀಲಿಸುವುದು, ಕಲ್ಪನೆ ಮಾಡುವುದು ಮತ್ತು ಗುರುತುಗಳಿಂದ ವ್ಯಕ್ತಗೊಳಿಸುವುದು ಮಗುವಿನ ಸಹಜ ಸ್ವಭಾವ. ಆರಂಭದಲ್ಲಿ ಮಗುವಿಗೆ ತನ್ನ ತಾಯಿಯೇ ಜಗತ್ತು. ಅಳುವುದು ಮತ್ತು ಕೈ ಕಾಲುಗಳ ಚಲನೆಗಳಿಂದ ತನ್ನ ಇಂಗಿತವನ್ನು ಅದು ಸೂಚಿಸುತ್ತದೆ. ಅದು ಮಗುವಿನ ಮೊತ್ತಮೊದಲಿನ ಭಾಷೆ. ಪ್ರಥಮದಲ್ಲಿ ಕೆಲವು ವಾರ ಹಸಿವೆಯನ್ನು ನಿವಾರಣೆ ಮಾಡಿಕೊಳ್ಳಲು ಅಳು, ತೃಪ್ತಿಯಾದೊಡನೆ ನಗು. ಈ ಸುದ್ದಿ ಸಂಪರ್ಕವು ಹೆಚ್ಚುಕಾಲ ಇಷ್ಟಕ್ಕೆ ಸೀಮಿತವಾಗಿರುವುದಿಲ್ಲ. ಹಿರಿಯರಂತೆ ಮಕ್ಕಳಿಗೆ ಕೂಡ ಸಮಾಧಾನ, ಅಸಮಾಧಾನ, ನಲಿವು ನೋವು ಮೊದಲಾದ ಭಾವನೆಗಳೂ, ಅವುಗಳನ್ನು ತಿಳಿಯಪಡಿಸುವ ಅಪೇಕ್ಷೆಗಳೂ ಇರುತ್ತವೆ. ನಿರ್ಬಂಧವನ್ನು ಅವರು ಅಪೇಕ್ಷಿಸರು. ಆಟವು ನಿರ್ಬಂಧಿತ ಚಟುವಟಿಕೆಯಾದುದರಿಂದ ಅವರಿಗೆ ಅದರಲ್ಲಿ ಆಸೆ. ಈ ಚಿತ್ರರಚನೆಯು

ರೇಖೆ ಬಣ್ಣಗಳಲ್ಲಿ ಅವರಿಗೆ ಒಂದು ಆಟವಾಗಿದೆ. ಮಾತ್ರವಲ್ಲ, ಅದರಿಂದ ಅವರಲ್ಲಿ ಆಲೋಚನಾ ಶಕ್ತಿಯು ವೃದ್ಧಿಯಾಗುತ್ತದೆ. ನಿರ್ಬಂಧ ರಹಿತ ಭಾವಾಭಿವ್ಯಕ್ತಿಗೆಡೆಗೊಡುವ ಕಲಾಪಾಠವು ಮಕ್ಕಳ ಮುಂದಿನ ಜೀವಮಾನದ ಏಳಿಗೆಗೆ ಸಾಧನವಾಗುತ್ತದೆ.

ವಯಸ್ಸಾದಂತೆ ಮಕ್ಕಳ ಕಲ್ಪನಾ ಸಾಮರ್ಥ್ಯವು ನಶಿಸತೊಡಗುತ್ತದೆ. ಯಥಾರೂಪ [realistic] ಚಿತ್ರಣಕ್ಕಾಗಿ ಅವರು ಬಯಸತೊಡಗುತ್ತಾರೆ. ಅದಕ್ಕಿಂತ ಮೊದಲೇ ತದ್ರೂಪ ಚಿತ್ರಮಾಡಿಸುವುದು ಅವರ ಸ್ವಭಾವಕ್ಕೆ ವಿರುದ್ಧವಾಗಿದೆ. ನಿಸರ್ಗನಿಯಮಗಳನ್ನು ತಿಳಿದು ಅವುಗಳಿಗನುಗುಣವಾಗಿ ವರ್ತಿಸಿ ಗೆಲ್ಲಬೇಕು. ಉದಾಹರಣೆಗಾಗಿ ನಾವು ವಿದ್ಯುತ್, ಉಗಿ[steam] ಮೊದಲಾದವುಗಳಮೇಲೆ ಪ್ರಭುತ್ವ ಗಳಿಸಿ ಅವುಗಳನ್ನು ನಮ್ಮ ಸೇವಕರಂತೆ ಅನೇಕ ಕೆಲಸಗಳಿಗಾಗಿ ಉಪಯೋಗಮಾಡಿಕೊಳ್ಳುತ್ತೇವೆ. ಇದು ಹೇಗೆ ಸಾಧ್ಯವಾಯಿತು ? ಅವುಗಳ ನಿಸರ್ಗನಿಯಮಗಳನ್ನು ಅರಿತೆವು. ಆ ನಿಯಮಗಳಿಗೆ ವಿರೋಧವಾಗಿ ನಡೆಯದೆ, ಅನುಗುಣವಾಗಿಯೇ ವರ್ತಿಸಿ ಅವುಗಳನ್ನು ನಮಗೆ ಬೇಕಾದಂತೆ ಬಳಸಿಕೊಳ್ಳಲು ಸಮರ್ಥರಾದೆವು. ಹಾಗೆಯೇ ಮಕ್ಕಳ ಚಿತ್ರಕಲಾ ಶಿಕ್ಷಣ ವಿಷಯದಲ್ಲೂ ನಿಸರ್ಗನಿಯಮಾನುಸಾರ ವರ್ತಿಸಿ ಅವರನ್ನು ಉತ್ತಮ ಮಾನವರನ್ನಾಗಿ ರೂಪಿಸಬೇಕು.

**ಚಿತ್ರಕಲಾಪಾಠಗಳು ಅಂದು ಇಂದು:**

ಅಂದು ಎಂದರೆ ?

" ಇಂದಿನ ಬೋಧಕರೂ, ಪಾಲಕರೂ ಬಾಲಕರಾಗಿದ್ದ ಕಾಲ " ಅನ್ನಬಹುದು. ಇತಿಹಾಸದಲ್ಲಿ ಇದು ಅತ್ಯಲ್ಪಕಾಲ. ಆದರೆ ಈ ಅವಧಿಯಲ್ಲಿ ಕಲಾಶಿಕ್ಷಣದಲ್ಲಿ ಒಂದು ಕ್ರಾಂತಿಯಾಗಿದೆ.

ಅಂದು ವಸ್ತುಚಿತ್ರ, ತದ್ರೂಪ ಚಿತ್ರಗಳನ್ನು ಮೊದಲು

ಮಾಡಿಸುತ್ತಿದ್ದರು. ಅನಂತರ ಕಲಾಪ್ರತಿಭೆ ಉಳ್ಳ ದೊಡ್ಡ ಮಕ್ಕಳಿಗೆ ಕಲ್ಪನಾಚಿತ್ರ, ಕಥಾಸಂದರ್ಭ ಚಿತ್ರಗಳನ್ನು ರಚಿಸಲು ಕಲಿಸುತ್ತಿದ್ದರು. ಈಗ ಕಲ್ಪನಾಚಿತ್ರ, ಕಥಾಸಂದರ್ಭ ಚಿತ್ರಗಳನ್ನೇ ಆರಂಭವಲ್ಲಿ, ತದ್ರೂಪಚಿತ್ರಗಳನ್ನು ಅನಂತರ ಕಲಿಸಬೇಕೆಂಬುದಾಗಿ ಸಿದ್ಧಾಂತವಾಗಿದೆ.

**ಹಿಂದೆ ಚಿತ್ರಪಾಠದ ಉದ್ದೇಶ**—ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಅಭ್ಯಾಸ ಪತ್ರಿಕೆಯಲ್ಲಿ ಚಿತ್ರಪಾಠವನ್ನು ಹಿಂದಿನಿಂದಲೂ ಸೇರಿಸಿದ್ದರು. ಆಗ ಅವರ ಉದ್ದೇಶವು " ಪುಸ್ತಕ ಪಾಂಡಿತ್ಯ, ಗಣಿತ ಮತ್ತು ವಿಜ್ಞಾನಸೂತ್ರಗಳ ಜ್ಞಾನಮಾತ್ರ ಇದ್ದರೆ ಸಾಲದು. ಮನುಷ್ಯನ ಸ್ವಾಭಾವಿಕ ಚಟುವಟಿಕೆಗಳಿಗಾಗಿ ಹಸ್ತಕೌಶಲಾನುಭವವೂ ಬೇಕು." ಕೈ ಕಸುಬಿನ ಶ್ರೇಷ್ಠತೆಯನ್ನು ಪಡೆಯಲು ಚಿತ್ರಕಲೆಯನ್ನು ಅರಿತಿರಬೇಕು. ಚಿತ್ರ ಕಲಿತವನು ಕಲಾವಿದನಾಗಿ ಜೀವನ ನಿರ್ವಹಿಸಬಹುದು. ವೈದ್ಯಕೀಯ, ಎಂಜಿನಿಯರಿಂಗ್, ಅಧ್ಯಾಪನವೃತ್ತಿ, ಔದ್ಯೋಗಿಕ ವಿದ್ಯೆ, ತಾಂತ್ರಿಕ ಶಿಕ್ಷಣ, ವಿಜ್ಞಾನ ಮೊದಲಾದ ಅಭ್ಯಾಸಗಳಿಗೆ ಚಿತ್ರಜ್ಞಾನವು ಸಹಕಾರಿಯಾಗುತ್ತದೆ. ಈ ಕಲೆಯು ಸೂಕ್ಷ್ಮ, ನಿರೀಕ್ಷಣಾಶಕ್ತಿ, ಸ್ವಚ್ಛತೆ, ಅಚ್ಚುಕಟ್ಟುತನ ಮೊದಲಾದ ಗುಣಗಳನ್ನು ಕಲಿಸುತ್ತದೆ. ಇತರ ಚಿತ್ರ ಹಾಗೂ ಪ್ರಕೃತಿಸೌಂದರ್ಯಗಳನ್ನು ಅನುಭವಿಸಲು ಚಿತ್ರಜ್ಞಾನವು ಬೇಕು ಎಂಬುದಾಗಿ ಅಂದಿನವರ ಭಾವನೆಗಳಾಗಿದ್ದುವು.

**ಅಂದು ಕಲಾಪಾಠದ ಉದ್ದೇಶ**—ಚಿತ್ರಕಲಾಪಾಠವನ್ನು ಕುರಿತು ಈಗ ವಿದ್ಯಾತಜ್ಞರ ಯೋಚನೆಯೇ ಬೇರೆ. ಅಭಿಪ್ರಾಯವನ್ನು ಅರುಹಲು, ಯೋಚನಾ ಶಕ್ತಿ ಹೆಚ್ಚಿಸಲು ಜನರಿಗೆ ಭಾಷೆಯು ಮಾಧ್ಯಮವಾಗಿರುತ್ತದೆ. ಚಿತ್ರರಚನೆಯು ಶಿಶುಗಳ

ಸಹಜಭಾಷೆ. ಮಗುವಿನಲ್ಲಿ ಹುದುಗಿರುವ ರಚನಾತ್ಮಕ ಮನೋವೃತ್ತಿಯನ್ನು ಬೆಳೆಯಿಸುವುದು, ಸೂಕ್ಷ್ಮಬುದ್ಧಿ, ಆಲೋಚನಾಶಕ್ತಿಗಳನ್ನು ಹೆಚ್ಚಿಸುವುದು ಆವಶ್ಯಕ ವಿಚಾರಗಳಾಗಿವೆ. ಅವುಗಳನ್ನು ಈ ಚಿತ್ರಕಲಾಪಾಠವು ಸಾಧಿಸಬಲ್ಲುದು ಎಂಬುದಾಗಿ ಕಲಾಶಿಕ್ಷಣವನ್ನು ಕುರಿತು ಈಗಿನವರ ಸಿದ್ಧಾಂತ. ಅಲ್ಲದೆ ಚಿತ್ರಕಲಾಜ್ಞಾನ ಮತ್ತು ಸುಸಂಸ್ಕೃತಿಯ ಅಭಿರುಚಿಯು ನಾಗರಿಕತೆಗೆ ಆವಶ್ಯಕ. ಆದುದರಿಂದ ಈಗಿನದು ಕಲಾಪಾಠವಾಗಿದೆ, ಹಿಂದಿನದು ಹಸ್ತಕೌಶಲ್ಯವನ್ನುಂಟುಮಾಡುವ, ವಸ್ತುಗಳ ಹೋಲಿಕೆ ಪ್ರತಿ ತೆಗೆಯುವ ಚಿತ್ರ [Copy] ಪಾಠವಾಗಿತ್ತು.

**ಅಂದು ಚಿತ್ರ ಬೋಧನಾಕ್ರಮ**—ತದ್ರೂಪರಚನಾಶಕ್ತಿಯನ್ನು ಉಂಟುಮಾಡುವುದೇ ಆಗಿನ ಚಿತ್ರಪಾಠದ ಗುರಿಯಾಗಿತ್ತು. ಆದುದರಿಂದ ಪೆನ್ಸಿಲನ್ನು ಹಿಡಿಯುವ ರೀತಿ, ವೃತ್ತ, ಅಡ್ಡ, ನೀಟ, ಓರೆ ಮೊದಲಾದ ರೇಖೆಗಳನ್ನು ಎಳೆಯುವುದನ್ನು ಕಲಿಸುತ್ತಿದ್ದರು. ಚಿಕ್ಕಮಕ್ಕಳಿಗೆ ಪರಿಚಿತವಾದ ಸ್ಲೇಟು, ಚೆಂಡು, ಬಾಲ್ದಿ, ಹರಿವಾಣ, ಬೀಸಣಿಗೆ, ಲೋಟೆ ಮೊದಲಾದ ಸುಲಭಾಕಾರದ ವಸ್ತುಗಳನ್ನೂ, ಮನಸ್ಸನ್ನು ಆಕರ್ಷಿಸುವಂಥ ಪತಂಗ, ಹೂ, ಹಣ್ಣು ಮೊದಲಾದುವುಗಳನ್ನೂ, ಕರಿಹಲಗೆಯ ಮೇಲೆ ಚಿತ್ರಿಸಿ ಮಕ್ಕಳಿಂದ ನಕಲು ತೆಗೆಯಿಸುತ್ತಿದ್ದರು. ಅವುಗಳನ್ನು ಚಿತ್ರಿಸುವ ವಿಧಾನಗಳನ್ನು ಬೋಧಿಸುತ್ತಿದ್ದರು. ಪುರಾತನ ಶಿಲ್ಪಿಗಳಿಂದ ಆಯ್ದ ಸಮಾನಬದಿಗಳುಳ್ಳ ಬಿಡುಗೈ ಚಿತ್ರಗಳನ್ನು ನೋಡಿ ಚಿತ್ರಿಸಲು ಹೇಳುತ್ತಿದ್ದರು. ಯೂರೋಪಿನಲ್ಲಿ ಕೂಡ ಕಳೆದ ಶತಮಾನದಲ್ಲಿ ಇದೇ ಚಿತ್ರಪಾಠಕ್ರಮವು ಬಳಕೆಯಲ್ಲಿತ್ತು. ಹಸ್ತಕೌಶಲವು ವೃದ್ಧಿಯಾಗಬೇಕೆಂಬುದು ಅವರ ಉದ್ದೇಶವಾಗಿತ್ತು. ಅವರಿಗೆ ಆಗ ಹೆಚ್ಚುಮಂದಿ ಕುಶಲಕೆಲಸಗಾರರು ಬೇಕಾಗಿದ್ದರು. ಏಕೆಂದರೆ,

ಅಂದವಾದ ಕೈಗಾರಿಕಾ ವಸ್ತುಗಳಿಗೆ ದೊಡ್ಡ ಮಾರುಕಟ್ಟೆಗಳು ಇರುತ್ತಿದ್ದವು. ಆದುದರಿಂದ ಎಲ್ಲರೂ ಕಲಾದೃಷ್ಟಿಯುಳ್ಳವರಾಗುವುದು ಆಗತ್ಯ, ಅದರಿಂದ ದೇಶದ ಕೈಗಾರಿಕೆ, ವ್ಯಾಪಾರ ಅಭಿವೃದ್ಧಿಯಾಗುವುವು ಎಂಬುದಾಗಿ ಅಭಿಪ್ರಾಯವಿತ್ತು; ಮಾತ್ರವಲ್ಲ, ಸಂಗೀತವನ್ನು ಕೇಳಿ ಹೃದಯದಲ್ಲಿ ರಸಭಾವವು ಮೂಡುವಂತೆ ಆ ಬಿಡುಗೈಯ ಆಲಂಕಾರಿಕ ನಮೂನಾ ಚಿತ್ರಗಳಲ್ಲಿರುವ [Freehand ornamental designs] ಸೌಂದರ್ಯವು ಕೂಡ ಹೃದಯದಲ್ಲಿ ರಸಭಾವವನ್ನು ಮೂಡಿಸುವುದೆಂದು ಆ ಚಿತ್ರಪಾಠವನ್ನು ಸಮರ್ಥಿಸುತ್ತಿದ್ದರು. ಕಲಾಭಿರುಚಿಯುಳ್ಳ ಮಕ್ಕಳಿಗೆ ಶಾಲೆ ಬಿಟ್ಟೊಡನೆ ಕಾರ್ಖಾನೆಯಲ್ಲಿ ಕೆಲಸ ದೊರೆಯುತ್ತಿತ್ತು. ಆದಕಾರಣ ವಸ್ತುಗಳಿಗೆ ಆಕರ್ಷಕ ರೂಪ ಮತ್ತು ಬಣ್ಣಗಳನ್ನು ಕೊಡುವ ಶಿಕ್ಷಣಕ್ಕೆ ಪ್ರಾಧಾನ್ಯತೆ ಇತ್ತು.

ದಪ್ಪನಾದ ಮತ್ತು ತೆಳುವಾದ ಗೆರೆಗಳ ಪ್ರಯೋಗ, ವಸ್ತುಗಳ ಬೆಳಕು ನೆರಳುಗಳನ್ನು [Light and shade] ತೋರಿಸುವಿಕೆ ಅಕ್ಷರ ಚಿತ್ರಣ [lettering], ಪ್ರಾಣಿಗಳ ಮತ್ತು ಮನುಷ್ಯರ ಚಿತ್ರರಚಿಸಲು ಸುಲಭವಿಧಾನಗಳನ್ನು ಕಲಿಸುತ್ತಿದ್ದರು. ಉತ್ಸಾಹೀ ಶಿಕ್ಷಕರು ಸುಲಭಾಕಾರದ, ನಿತ್ಯಬಳಕೆಯ ವಸ್ತು, ಪಾತ್ರೆಗಳನ್ನು ಇದಿರಿನಲ್ಲಿ ಇಟ್ಟು ತದ್ರೂಪ ಚಿತ್ರಿಸಲು, ಅಥವಾ ಬಾಲಕರನ್ನು ಹೊರಗೆ ಕರೆದುಕೊಂಡುಹೋಗಿ ಇದಿರಿನ ಪ್ರಕೃತಿದೃಶ್ಯವನ್ನು ರಚಿಸಲು ಕಲಿಸುತ್ತಿದ್ದರು. ಮಕ್ಕಳು ಚಿತ್ರಗಳಲ್ಲಿ ಏನೆಲ್ಲಾ ತಪ್ಪುಗಳನ್ನು ಮಾಡಬಹುದೆಂಬುದನ್ನು ಅಧ್ಯಾಪಕರು ಮುಂದಾಗಿ ಯೋಚಿಸಿ ಅವುಗಳ ನಿವಾರಣೆಗಾಗಿ ಎಚ್ಚರಿಕೆ ಕೊಡುತ್ತಿದ್ದರು. ಅನಂತರ ವಿದ್ಯಾರ್ಥಿಗಳಿಗೆ ಚಿತ್ರಮಾಡಲು ಹೇಳುತ್ತಿದ್ದರು. ಅಧ್ಯಾಪಕರದ್ದೇ ವಿಶೇಷ ಕೆಲಸ. ಎಲ್ಲಾ ಸಿದ್ಧತೆ ಮಾಡಿಕೊಡು

ತ್ತಿದ್ದರು. ನಕಲು ಪ್ರತಿ ತೆಗೆಯುವುದೊಂದೇ ಮಕ್ಕಳ ಕೆಲಸ. ಯೋಚನಾಶಕ್ತಿಗೆ ಏನೂ ಕೆಲಸವಿಲ್ಲ. ತರಗತಿಯಲ್ಲೇನೋ ಒಂದು ಶಿಸ್ತು, ವ್ಯವಸ್ಥೆ ತೋರಬಹುದು. ಕಾರ್ಖಾನೆಯಲ್ಲಿ ತಯಾರಾದ ಎಲ್ಲಾ ವಸ್ತುಗಳೂ ಒಂದೇ ತರದವುಗಳಿರುವಂತೆ ಇಡೀ ತರಗತಿಯ ಎಲ್ಲಾ ಮಕ್ಕಳಿಂದಲೂ ಕಾಗದಗಳ ಮೇಲೆ ಏಕರೂಪದ ಚಿತ್ರ ತಯಾರಿಯು ನಡೆಯುತ್ತಿತ್ತು. ಆ ಪಾಠ ಕ್ರಮವನ್ನು ಬೆಂಬಲಿಸುವವರು ೧೬ನೇ ಶತಮಾನದ ಪ್ರತಿಭಾಶಾಲಿ ಕಲಾವಿದನಾದ ಲಿಯಾನಾರ್ಡೋ ಡಾ ವಿನ್ಸಿಯ ಈ ಕೆಳಗಿನ ಉಕ್ತಿಯನ್ನು ಎತ್ತಿ ಹೇಳಿ ಸಮರ್ಥಿಸುತ್ತಾರೆ.

" ವರ್ಣಚಿತ್ರಕಲೆಯ ವಿದ್ಯಾರ್ಥಿಗಳು ಪ್ರಥಮವಾಗಿ ಯಥಾ ದೃಷ್ಟರೂಪಣ ಕಲೆಯನ್ನು [perspective] ಅಭ್ಯಸಿಸಬೇಕು. ಇದರಿಂದ ವಸ್ತುಗಳನ್ನು ಕಣ್ಣಿಗೆ ಕಾಣುವಂತೆ ತಕ್ಕ ಸ್ಥಾನ ಪ್ರಮಾಣಗಳಲ್ಲಿ ಚಿತ್ರಿಸಲಾಗುವುದು. ಅನಂತರ ಅಂದವಾಗಿ ಕಾಣುವಂತೆ ರೇಖಾವಿನ್ಯಾಸ, ಮನುಷ್ಯ, ಪ್ರಾಣಿ ಮೊದಲಾದುವುಗಳ ಆಕಾರ, ಪ್ರಮಾಣ, ರಚನಾಕ್ರಮಗಳನ್ನು ಗುರುಮುಖದಿಂದ ಕಲಿಯಬೇಕು. ಪ್ರಕೃತಿಯನ್ನು ಪರಿಶೀಲಿಸಬೇಕು. ಹಿಂದಿನ ಮಹಾಕಲಾವಿದರ ಕೃತಿರತ್ನಗಳನ್ನು ಪ್ರತಿ ತೆಗೆದು ಅನುಭವ ಹೆಚ್ಚಿಸಿಕೊಂಡು ಸ್ವಂತ ಕಲಾಕೃತಿ ರಚನೆ ಮಾಡಬೇಕು " ಎಂಬುದಾಗಿ ಚಿತ್ರಗ್ರಂಥದಲ್ಲಿ ಲಿಯಾನಾರ್ಡೋ ಹೇಳಿದ್ದನು. ಆದರೆ ಆತನು ಆ ಮಾತುಗಳನ್ನು ಆ ಕಾಲದಲ್ಲಿ ಕಲಾವಿದರಾಗಲು ಬಯಸುವ ವಯಸ್ಕರಿಗಾಗಿ ಹೇಳಿದ್ದನು, ಚಿಕ್ಕಮಕ್ಕಳಿಗಾಗಿ ಅಲ್ಲ. ಕೆಲವು ವರುಷಗಳ ಹಿಂದೆ ಕಲಾಶಿಕ್ಷಕರಾದವರುಕೂಡ ಚಿತ್ರಕಲಾವಿದರನ್ನು ತರಪೇತು ಮಾಡುವ ಚಿತ್ರಕಲಾಶಾಲೆಗಳಲ್ಲಿ ಅದೇ ವಿಧಾನದಿಂದ ಕಲಿತವರು. ಆದುದರಿಂದ ಅವರು ಮಕ್ಕಳಿಗೆ

ಆರಂಭದಿಂದಲೇ ವಸ್ತುಚಿತ್ರಕಲಾತಂತ್ರಗಳನ್ನು ಕಲಿಸುತ್ತಿದ್ದರು.

**ಇಂದಿನ ವಿಚಾರಧಾರೆ**— ವಿಚಾರವಂತರಾದ ಕೆಲವರಿಗೆ ಹಿಂದಿನ ಆ ಕ್ರಮವು ದೋಷಯುಕ್ತವೆಂದು ಕ್ರಮೇಣ ಭಾಸವಾಯಿತು. ಮಕ್ಕಳ ಮನಸ್ಸಿನಲ್ಲಿ ಉಂಟಾಗಬೇಕಾದ ಉಲ್ಲಾಸ, ತಲ್ಲೀನತೆ ಅದರಲ್ಲಿ ಸಿಗುತ್ತಿರಲಿಲ್ಲ. ಶಿಸ್ತಿನ ಕಟ್ಟುಪಾಡುಗಳಿಗಾಗಿ ಅವರು ಚಿತ್ರಿಸುತ್ತಿದ್ದರು. ಆ ಪಾಠಕ್ರಮವು ಯಾಂತ್ರಿಕವಾಗಿತ್ತು. ಸಾದೃಶ್ಯ ರೂಪಚಿತ್ರಣವು ಹಿರಿಯರಿಗೆ ಆಸಕ್ತಿಯ ಪಾಠವಾಗಿರಬಹುದು. ಮಗುವಿಗೆ ಇನ್ನೂ ಆ ದೃಷ್ಟಿ ಬರಲಿಲ್ಲ. ದರ್ಜೆಯ ಎಲ್ಲಾ ಮಕ್ಕಳು ಒಂದೇ ತರಹದ ಒಂದೇ ಮಟ್ಟದ ಚಿತ್ರ ಸೃಜಿಸಬೇಕೆಂದು ನಿರೀಕ್ಷಿಸಬಾರದು. ಇತರ ಚಿತ್ರನೋಡಿ ಅಥವಾ ವಸ್ತು ನೋಡಿ ಚಿತ್ರಿಸುವುದಕ್ಕಿಂತ ಕಲ್ಪನೆಯಿಂದ ರಚಿಸುವುದು ಮಕ್ಕಳಿಗೆ ಸುಲಭದ ಕೆಲಸ. ಕಲ್ಪನಾ ಸಾಮರ್ಥ್ಯವನ್ನು ವರ್ಧಿಸುವುದು ಕಲಾಶಿಕ್ಷಣದ ಹಿರಿಯ ಗುರಿ. ಕಲೆಯು ನಿರ್ಮಾಣ ಗುಣವುಳ್ಳದ್ದು. ಮೂರನೆಯ ಪ್ರಮಾಣವಾದ ದಪ್ಪ ಅಥವಾ ದೂರವನ್ನು ಮಕ್ಕಳು ಚಿತ್ರಿಸಲಾರರು. ಆದುದರಿಂದ ಎಳೆತನದಲ್ಲಿ ಕಟ್ಟುನಿಟ್ಟಿನ ಚಿತ್ರಪಾಠ, ಚಿತ್ರಗಳ ನಕಲು ತೆಗೆಯಿಸುವುದು ಗೆರೆಗಳನ್ನು ಎಳೆಯಲು ಅಭ್ಯಾಸ ಮಾಡಿಸುವುದು, ವಸ್ತುಗಳನ್ನಿಟ್ಟು ಚಿತ್ರಮಾಡಿಸುವುದು ಸಲ್ಲದು.

ಈ ನವೀನ ಪದ್ಧತಿಯು ರೂಪರಚನಾ ಸಾಮರ್ಥ್ಯ ಕಡಮೆ ಇರುವ ಮಕ್ಕಳಿಗೂ ಮಹತ್ವದ್ದಾಗಿದೆ. ಏಕೆಂದರೆ ಇದು ಅವರಲ್ಲಿ ಆತ್ಮವಿಶ್ವಾಸ ಹೆಚ್ಚಿಸುತ್ತದೆ. ಸೃಜನಾತ್ಮಕ ಗುಣಗಳನ್ನು ಉಂಟು ಮಾಡುತ್ತದೆ. ಸ್ವಾತಂತ್ರ್ಯ ನೀಡಿ ಆಲೋಚನಾಶಕ್ತಿಯನ್ನು ಉಪಯೋಗಿಸುವಂತೆ ಮಾಡುತ್ತದೆ. ಎಲ್ಲರಲ್ಲೂ ಸಹಜವಾಗಿರುವ ಭಾವೋದ್ವೇಗವನ್ನು ರಚನಾತ್ಮಕ ಕಾರ್ಯಗಳಲ್ಲಿ ವಿನಿಯೋಗಿಸುವ

ಅಭ್ಯಾಸವನ್ನು ಉಂಟುಮಾಡುತ್ತದೆ. ಕಲಾಕೃತಿ ರಚಿಸಿದವರಿಗೆ ಆತ್ಮಸಂತೋಷವೂ ಕಲಾಕೃತಿಗಳನ್ನು ನೋಡುವವರಿಗೆ ಆನಂದವೂ ಉಂಟಾಗುತ್ತವೆ. ಒಟ್ಟಾರೆ ಈ ಪಾಠವು ಮಗುವಿನ ಭಾವನೆಗಳನ್ನು ಆಕಾರ ಗುರುತುಗಳಿಂದ ಅರುಹುವುದಾಗಿದೆ.

ಕಲೆಯ ಜ್ಞಾನವು ಎಲ್ಲರಿಗೂ ಆವಶ್ಯಕವಾಗಿದೆ. ಸಾಮಾನ್ಯವಾಗಿ ಕಲೆ ಎಂದರೆ ಮನುಷ್ಯನು ನಿರ್ಮಿಸಿದ್ದರಲ್ಲಿ ಸೌಂದರ್ಯವು ತೋರಿಬರುವಂತೆ ಮಾಡುವುದು. ಅದು ಕಟ್ಟಡ, ನಗರ, ಹೂದಾನಿ, ಇತಿಹಾಸಕಥನ, ಉಡುಗೆತೊಡುಗೆ, ಕೈಗಾರಿಕಾ ವಸ್ತುಗಳು ಯಾವುದೇ ಆಗಬಹುದು. ಅದನ್ನು ಮೆಚ್ಚಲು ಕಲಾಶಿಕ್ಷಣವು ಅಗತ್ಯವಾಗಿದೆ. ಸೂರ್ಯಚಂದ್ರರ ಉದಯಾಸ್ತಗಳು ಅರಣ್ಯ, ಬೆಟ್ಟ, ಮೋಡ, ನದಿ, ಹೂ, ಹಕ್ಕಿ ಮೊದಲಾದುವುಗಳಲ್ಲಿ ತೋರುವುದು ಪ್ರಕೃತಿಸೌಂದರ್ಯ. ಹಿಂದಿನ ಪಾಠಕ್ರಮವು ಇಂತಹ ಪ್ರಕೃತಿ ಸೌಂದರ್ಯವನ್ನು ನೋಡಬಲ್ಲ ಗುಣವನ್ನುಂಟುಮಾಡುತ್ತಿತ್ತು. ಆದರೆ ಕಲಾಪಾಠದ ಉದ್ದೇಶವು ಅಷ್ಟುಮಾತ್ರವಲ್ಲ.

ಕಲಾವಿದನು ಸೌಂದರ್ಯವನ್ನು ನಿರ್ಮಾಣ ಮಾಡುತ್ತಾನೆ. ಹೊಸಸೃಷ್ಟಿ ಮಾಡುತ್ತಾನೆ. ಹೀಗೆ ಕಲೆಯು ಕೂಡ ಒಂದು ಸಂಶೋಧನೆ. ಈ ಪ್ರವೃತ್ತಿಯು ನಾಗರಿಕ ಸಮಾಜದ ಉನ್ನತಿಗೆ ಅಗತ್ಯವಾಗಿದೆ. ಸಂಶೋಧನೆ ಮತ್ತು ನಿರ್ಮಾಣಮಾಡುವ ಗುಣಗಳನ್ನು ಕಲೆಯ ಅಭ್ಯಾಸದಿಂದ ಬೆಳೆಯಿಸಿಕೊಳ್ಳಬಹುದೆಂದು ತಜ್ಞರು ಹೇಳುತ್ತಾರೆ. ಕಲಾಪ್ರೇಮವು ಮಾನವನ ಸಹಜಗುಣವಾಗಿದೆ. ಆದಿಮಾನವನಲ್ಲೂ ಕಲಾಪ್ರೇರಣೆ ಇತ್ತು. ಗುಹೆಯು ಆತನ ಮನೆಯಾಗಿತ್ತು. ಅವನು ಅದನ್ನು ಸಿಂಗರಿಸುತ್ತಿದ್ದನು. ಕೈ ಕಾಲು ಮುಖಗಳಿಗೆ ಬಣ್ಣಹಚ್ಚಿಕೊಳ್ಳುತ್ತಿದ್ದನು. ಆತನು ಬಳಸುತ್ತಿದ್ದ ಆಯುಧಗಳೂ, ಪಾತ್ರೆಗಳೂ ಕಲ್ಲು ಮಣ್ಣುಗಳದ್ದಾಗಿ

ದ್ದವು. ಆದರೂ ಅವನು ಅವುಗಳ ಉಪಯೋಗ ಗುಣಗಳಿಂದ ಮಾತ್ರ ತೃಪ್ತನಾಗಲಿಲ್ಲ. ಅವುಗಳಿಗೆ ಸೊಗಸಾದ ಆಕಾರ ಬಣ್ಣ ಕೊಟ್ಟು ಬಳಸುತ್ತಿದ್ದನು. ಕಲೆಯ ಜ್ಞಾನವು ಜೀವನವನ್ನೇ ಒಂದು ಕಲೆಯಾಗಿ ನಿರ್ವಹಿಸಲು ಸಹಕಾರಿಯಾಗುತ್ತದೆ.

ಹಿಂದಿನ ಮತ್ತು ಇಂದಿನ ಚಿತ್ರಕಲಾಪಾಠಗಳಲ್ಲಿ ಬಹಳ ಬೇಧಗಳಿವೆ. ಹಿಂದೆ ಚಿತ್ರಕಲಾಪಾಠವಲ್ಲಿ ಹೊರ ರೂಪ ನಿಷ್ಕೃಷ್ಟತೆಯೇ ಪ್ರಧಾನವಾಗಿತ್ತು. ಆದರೆ ಇಂದು ಈ ಪಾಠವು ಭಾವನೆಗಳನ್ನು ನಿರೂಪಿಸುವುದಕ್ಕೆ ಒಂದು ಸಾಧನವಾಗಿದೆ. ಹಿಂದೆ ವಯಸ್ಕರ ದೃಷ್ಟಿಗನುಗುಣವಾದ ವಸ್ತು ಚಿತ್ರರಚನೆ ಮಾಡಿಸುತ್ತಿದ್ದರೆ ಇಂದು ಮಕ್ಕಳು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಭಾವನೆಗಳನ್ನು ನಿರೂಪಿಸಲು ಅವಕಾಶ ನೀಡಲಾಗಿದೆ. ಈ ನವೀನ ವಿಧಾನದಲ್ಲಿ ಅವರಿಗೆ ಆಸಕ್ತಿ ಇರುತ್ತದೆ. ಹಿಂದೆ, ರೇಖಾಚಿತ್ರಗಳೇ ಅಧಿಕ. ಈಗ ಮಕ್ಕಳಿಗೆ ಇಚ್ಛಾನುಸಾರ ಬಣ್ಣ ಹಾಕಲು ಹೆಚ್ಚು ಅವಕಾಶ. ಹಿಂದಿನದರಲ್ಲಿ ಮಗುವಿನ ಸ್ವಭಾವವನ್ನು ಅನಾದರಿಸಿ ಕಲಾತಂತ್ರದ ಕಡೆಗೆ ಲಕ್ಷ್ಯನೀಡಲಾಗುತ್ತಿತ್ತು. ಈಗಿನದರಲ್ಲಿ ಮಗುವಿನ ಸ್ವಭಾವವನ್ನು ಗೌರವಿಸಿ ಗಮನಸೆಳೆದು ಆಸಕ್ತಿ ಉಂಟುಮಾಡಿ ರಚನೆ ಮಾಡಿಸಲಾಗುತ್ತಿದೆ. ಅಪ್ಪಣೆಯನ್ನು ವಿಧಿಸಿ ಆಕಾರಗಳ ನಕಲು ತೆಗೆಯಿಸಿ ಕಲ್ಪನೆಯನ್ನು ನಾಶಗೊಳಿಸುವುದಿಲ್ಲ. ಈಗ ಕಲ್ಪನೆಗೆ ಪ್ರಧಾನ ಸ್ಥಾನ. ಏಕೆಂದರೆ ಕಲ್ಪನೆಯು ಆತ್ಮದಂತೆ, ಹೊರ ಆಕಾರವು ದೇಹದಂತೆ. ಆತ್ಮವನ್ನು ಹೊರಪಡಿಸಿ ದೇಹವನ್ನು ಪೂಜಿಸತಕ್ಕದ್ದಲ್ಲ. ಮಗುವಿನ ಭಾವನೆಗಳನ್ನು ಅರಳಿಸಬೇಕು. ಅದಕ್ಕಾಗಿ ಶಿಶುಚಿತ್ರಕಲಾಶಿಕ್ಷಣವು ಅಗತ್ಯ. ಇದು ನಮ್ಮಲ್ಲಿ ಅಲ್ಲಲ್ಲಿ ಇತ್ತೀಚೆಗೆ ಆಚರಣೆಯಲ್ಲಿ ಬರತೊಡಗಿದೆ. ಹೀಗೆ ಚಿತ್ರಕಲಾಪಾಠವು ನಮ್ಮಲ್ಲಿ ಹಿಂದಿನ ಮತ್ತು ಇಂದಿನ ಎರಡು ಕೊನೆಗಳ

ನಡುವೆ ಈಗ ಸಾಗುತ್ತಾ ಇದೆ. ಬರೀ ಕಣ್ಣು ಕೈಗಳ ತರಬೇತಿ ನಡೆಯುತ್ತಿದ್ದ ಹಿಂದಿನ ಚಿತ್ರಪಾಠದ ಗುರಿಯು ಕಿರಿದಾದುದು. ಮಗುವಿನ ಮನೋವೃತ್ತಿಗೆ ಸ್ವಾತಂತ್ರ್ಯ ಕೊಟ್ಟು ಸ್ವಾಭಾವಿಕ ಜ್ಞಾನ ನಿರ್ಮಾಣ ಮತ್ತು ಕಲ್ಪನಾಶಕ್ತಿಗಳನ್ನು ಬೆಳಯಿಸುವ ಕಲಾಪಾಠದ ಗುರಿಯು ಹಿರಿದಾದುದು. ಪರೀಕ್ಷಾ ಪಾಠವಲ್ಲದ ಕಾರಣ ಸಾಮಾನ್ಯವಾಗಿ ಶಾಲೆಗಳಲ್ಲಿ ಚಿತ್ರಪಾಠದಮೇಲೆ ಆದರ, ಪ್ರೀತಿಗಳೇ ಕಡಮೆ. ಅಲ್ಲದೆ ಹಿಂದಿನ ಚಿತ್ರಪಾಠಪದ್ಧತಿಯು ಸಾರ್ವತ್ರಿಕವಾಗಿ ಬೇರೂರಿಹೋಗಿದೆ. ಆದಕಾರಣ ಈ ಶಿಶುಚಿತ್ರ ಕಲಾಪಾಠವು ನಿಧಾನವಾಗಿ ಆಚರಣೆಯಲ್ಲಿ ಬರುತ್ತಿದೆ.

**ಮಕ್ಕಳಕೈಗೆ ಕುಂಚ ಬಣ್ಣಗಳನ್ನು ಕೊಟ್ಟಾಗ ಅವರು ಏನನ್ನು ಚಿತ್ರಿಸುತ್ತಾರೆ ?**

ತನಗೆ ಪ್ರೀತಿಯುವರನ್ನು ಎಂದರೆ ಅಮ್ಮ, ಅಪ್ಪ, ಮುದ್ದಾದ ಪ್ರಾಣಿಗಳನ್ನೂ ಇಷ್ಟವಾದ ವಿಚಾರಗಳನ್ನೂ ಹೆಚ್ಚಾಗಿ ಚಿತ್ರಿಸುತ್ತಾರೆ. ಸಂತೋಷ ಆಶ್ಚರ್ಯಗಳನ್ನು ಉಂಟುಮಾಡುವ ಮನೆ ಅಂಗಡಿಗಳನ್ನೂ ಮತ್ತು ಕೆಲಸ ಆಟಗಳನ್ನೂ, ದೊಡ್ಡದಾದ ವಸ್ತುಗಳನ್ನೂ ಚಿತ್ರಿಸುತ್ತಾರೆ. ಬಣ್ಣಗಳೆಂದರೆ ಅವರಿಗೆ ಬಲು ಪ್ರೀತಿ

ಮೇಲಿನ ವಿಷಯಗಳನ್ನು ಚಿತ್ರಿಸಿರಿ ಎಂದರೆ ಹಿರಿಯರು ಹಿಂಜರಿಯುತ್ತಾರೆ. ಮಕ್ಕಳು ಮುಂದೆ ಬಂದು ಚಿತ್ರಿಸುತ್ತಾರೆ. ಅದೇನು ಕಾರಣ ?

ಹಿರಿಯರಾದ ನಾವು ವಸ್ತುಗಳ ಹೋಲಿಕೆ ಇರುವುದನ್ನು ಮಾತ್ರ ಚಿತ್ರ ಎಂದು ತಿಳಿಯುತ್ತೇವೆ. ಹೀಗೆ ರೂಪಸಾದೃಶ್ಯವನ್ನು ತರಲು ಕಷ್ಟವಾಗುವುದರಿಂದ ಚಿತ್ರಿಸಲು ಅಂಜುತ್ತೇವೆ. ಅಷ್ಟುಮಾತ್ರವಲ್ಲ. ಈ ಭಾವನೆಯಿಂದ “ ಮಕ್ಕಳ ಚಿತ್ರಗಳೆಂದರೆ ತಪ್ಪುಗಳ ರಾಶಿ, ಅವರಿಗೆ ತದ್ರೂಪಚಿತ್ರ ಮಾಡಲು ಕಲಿಸಬೇಕು.

ಎಂದು ಕೂಡ ನಮ್ಮ ನಂಬುಗೆಯಾಗಿದೆ.

ಆದರೆ ಮಕ್ಕಳ ಆ ಚಿತ್ರಗಳನ್ನು ಉತ್ತಮಕಲಾವಿದರೂ ವಿದ್ಯಾತಜ್ಞರೂ ಮೆಚ್ಚುತ್ತಾರೆ. ಆ ಚಿತ್ರಗಳೆಂದರೆ ಮಕ್ಕಳ ಆಲೋಚನೆಗಳ ಲೇಖನಗಳಾಗಿವೆ; ಆ ರಚನಾಕಾರ್ಯವು ಮಕ್ಕಳ ಮೇಲ್ಮೆಗೆ ಮಾರ್ಗವಾಗುತ್ತದೆ. ನಮಗೆ ಅರ್ಥವಾಗದಿದ್ದರೆ ಮಕ್ಕಳ ಚಿತ್ರಳನ್ನು ಅಸಂಬದ್ಧ ಎಂದು ನಿಷೇಧಿಸುವುದು ಏಕೆ ? ನವ್ಯ ಕಲೆಯು ಅರ್ಥವಾಗುತ್ತದೆಯೇ ? ತಮಗೆ ಅರ್ಥವಾಯಿತು ಅನ್ನುವ ಕೆಲವು ಮಂದಿಗೂ ಒಂದೇ ಅರ್ಥ ಆಗಿದೆಯೇ ? ಮಕ್ಕಳು ರಚಿಸಿದುದು ಎಂದು ತಿಳಿಸದಿದ್ದರೆ ಅವರ ಕೆಲವು ಕೃತಿಗಳನ್ನು [Dadaism, Post-impressionism, Expressionism, Surrealism, Futurism] ಮೊದಲಾದ ನವ್ಯಕಲೆಯ ಒಂದಲ್ಲ ಒಂದು ಹೊಸ ಪಂಥಕ್ಕೆ ಸೇರಿದ ಕೃತಿರತ್ನ ಎಂದು ಮನ್ನಿಸುವಂತಿಲ್ಲವೇ ? ಆದರೆ ಮಕ್ಕಳಿಗೆ ಆ ತಂತ್ರಜ್ಞಾನದ ಅರಿವು ಇಲ್ಲದೆ ಆಕಸ್ಮಿಕವಾಗಿ ಆ ಸಂಪ್ರದಾಯದ್ದೆಂದು ಅನಿಸಿಕೊಳ್ಳುವ ರಚನೆಯಾಗುವುದು ನಿಜ. ಚಿತ್ರವು ಪ್ರತಿಮಗುವಿನಲ್ಲೂ ಸ್ವಾಭಾವಿಕವಾಗಿರತಕ್ಕ ನಿರ್ಮಾಣ ಶಕ್ತಿಯ ಮತ್ತು ಆತ್ಮಪ್ರಕಟಣೆಯ ಪರಿಣಾಮವಾಗಿದೆ.

## ಮಕ್ಕಳು ಎಂತಹ ಚಿತ್ರ ರಚಿಸುತ್ತಾರೆ ? ಹಾಗೆ ಮಾಡಲು ಕಾರಣಗಳೇನು ?

ಎತ್ತಿನ ಬಂಡಿಯ ಚಿತ್ರ ರಚಿಸಿವರೆನ್ನಿ, ಆಗ ಅವರ ಎರಡೂ ಚಕ್ರಗಳನ್ನೂ ಒಂದೇ ಕಡೆ ನಮ್ಮ ಕಡೆ ಚಿತ್ರಿಸುತ್ತಾರೆ. ಬಂಡಿಯ ಆಚೆ ಈಚೆ ಎರಡು ಬದಿಗಳಲ್ಲಿ ಒಂದೊಂದು ಚಕ್ರವು ಇರುವುದುಲ್ಲವೆ ? ಬಾವಿಯ ತಳಕ್ಕೆ ಇಳಿದ ಹಗ್ಗಕೊಡಪಾನಗಳನ್ನೂ, ಡಬ್ಬಿಯೊಳಗೆ ಇರುವ ತಿಂಡಿ ತಿನಸುಗಳನ್ನೂ, ಗಿಡ ಮಾಡಿದಾಗ ಅವರ ಬೇರುಗಳನ್ನೂ ತೋರಿಸುತ್ತಾರೆ. ಅವೆಲ್ಲಾ ಹೊರಗಿನಿಂದ ಹಾಗೆ

ತೋರಬಲ್ಲವೆ ? ಬಾವಿಯ ಆವರಣ, ಡಬ್ಬಿ, ಮಣ್ಣುಗಳೆಲ್ಲವೂ ಪಾರದರ್ಶಕಗಳೇ ? ಒಂದು ಬುಟ್ಟಿಯ ಹೊರ ಆಕಾರ ಬಿಡಿಸಿ. ಅದರೊಳಗೆ ಹಣ್ಣುಹಂಪಲುಗಳನ್ನು ಚಿತ್ರಿಸುತ್ತಾರೆ. ಆ ಹಣ್ಣುಗಳು ಕೂಡ ಒಂದಕ್ಕೊಂದು ತಗಲದೆ, ಒಂದಕ್ಕೊಂದು ಅಡ್ಡವಾಗದೆ ವಿರಳವಾಗಿ ಇರುತ್ತವೆ. ಇವೆಲ್ಲವೂ ತಪ್ಪುಗಳಲ್ಲವೆ ? ಮಕ್ಕಳಿಗೆ ಬುದ್ಧಿಹೇಳಿ ತಿದ್ದಬೇಡವೆ ? ಇದು ಹಿರಿಯರ ದೃಷ್ಟಿ. ಮಕ್ಕಳ ದೃಷ್ಟಿ ಏನು ? " ಆ ಎಲ್ಲಾ ವಸ್ತುಗಳು ಅಲ್ಲಿ ಇವೆ. ಗಾಡಿಗೆ ಚಕ್ರ ಎರಡು. ಬುಟ್ಟಿಯೊಳಗೆ ಈ ಹಣ್ಣುಗಳೆಲ್ಲಾ ಇವೆ. ಅವರಿಗೆ ಗೊತ್ತಿರುವುದನ್ನೂ ಅವರ ಆಲೋಚನೆಗಳನ್ನೂ ರೇಖೆ ಬಣ್ಣಗಳಲ್ಲಿ ತಿಳಿಯಪಡಿಸುತ್ತಾರೆ. ಒಂದು ಜಾಗದಲ್ಲಿ ನಿಂತು ನೋಡುವಾಗ ಮನೆಯ ಎರಡು ಬದಿಗಳು ಮಾತ್ರ ತೋರಬಲ್ಲವು. ಮನೆಯ ಮೂರು ಬದಿಗಳೂ ತೋರಲು ಸಾಧ್ಯವೇ ? ಇಲ್ಲ. ಮಕ್ಕಳು ಮನೆಯ ಮೂರು ಬದಿಗಳನ್ನೂ ಚಿತ್ರಿಸಿ ತೋರಿಸುತ್ತಾರೆ. ಕಂಬಗಳಮೇಲೆ ವಸ್ತುಗಳನ್ನು ಇಟ್ಟಹಾಗೆ ಮೆಟ್ಟಲುಗಳ ಮೇಲೆ ಮನೆಯನ್ನು ಚಿತ್ರಿಸುತ್ತಾರೆ. ಅಷ್ಟೇ ಅಲ್ಲ ಅಡಿಯ ಚಿಕ್ಕ ಮೆಟ್ಟಲು ಅದರಮೇಲೆ ದೊಡ್ಡಮೆಟ್ಟಲುಗಳು, ಮೆಟ್ಟಲು ಏರಿ ಮನೆಯೊಳಗೆ ಹೋಗಬೇಕೆಂದು ಅವರ ಚಿತ್ರಣ. ಅವರ ಚಿತ್ರಗಳಲ್ಲಿ ವಸ್ತ್ರ ಉಟ್ಟಿದ್ದರೂ, ಅಂಗಿ ಹಾಕಿದ್ದರೂ ಒಳಗಿನ ಮೈಯ ಗೆರೆಗಳು ತೋರುತ್ತವೆ; ಅಡಗಿರುವುದಿಲ್ಲ. ಹಿಂದಿನ ರಾಜಪೂತ, ಮೊಗಲ ಕಾಂಗ್ರಾ ಅಂತೆಯೇ ಇತರ ಕೆಲವು ಶೈಲಿಯ ಚಿತ್ರಗಳಲ್ಲೂ ಹಾಗೇ ಇದ್ದುದನ್ನು ಕಾಣಬಹುದು. ಒಂದು ವಸ್ತುವು ಮತ್ತೊಂದಕ್ಕೆ ಅಡ್ಡವಾಗಿರುವಾಗ ಹಿಂದಿನದ್ದು ಪೂರ್ಣವಾಗಿ ತೋರಲಾರದು, ಅಂಶ ಮಾತ್ರ ಕಾಣುವುದು ಎಂಬ ವಸ್ತುಜ್ಞಾನವು ಅವರಿಗಿಲ್ಲ. ರೇಶನ್ ಅಕ್ಕಿ ಪಡೆಯಲು, ಬಸ್ಸಿಗಾಗಿ ಕಾಯಲು ' ಕ್ಯೂ '

ವಿನಲ್ಲಿ ನಿಂತವರನ್ನು ಚಿತ್ರಿಸುತ್ತಾರೆ. ಆದರೆ ಅವರೆಲ್ಲರೂ ಒಬ್ಬರ ಹಿಂದೆ ಮತ್ತೊಬ್ಬರು ನಿಂತಿದ್ದಾರೆ ಎಂಬ ದೃಷ್ಟಿ, ತರ್ಕಬುದ್ಧಿ ಅವರಿಗೆ ಬೇಡ. ಅವರೆಲ್ಲರೂ ಕಾಮನಿಂತಿದ್ದಾರೆ ಎಂಬ ಸತ್ಯ ವೊಂದೇ ಅವರಿಗೆ ಗೋಚರವಾಗಿದೆ. ಎಲ್ಲರನ್ನೂ ಇದಿರು ಮುಖ ಮಾಡಿ ಒಬ್ಬರ ಪಾರ್ಶ್ವದಲ್ಲಿ ಮತ್ತೊಬ್ಬರು ಸಾಲಾಗಿ ನಿಂತಿರುವ ಹಾಗೆ ಮಕ್ಕಳು ಚಿತ್ರಿಸುವುದು ಸಾಮಾನ್ಯವಾಗಿದೆ. ಮುಂದರಿದ ಕೆಲವು ದೇಶಗಳಲ್ಲಿ ಪ್ರಯಾಣಮಾಡುವಾಗ ಮಕ್ಕಳು ತಮ್ಮ ಹಿರಿಯರೊಡನೆ ತವಕದಿಂದ ಪ್ರಯಾಣದ ಟಿಕೆಟನ್ನು ಕೇಳುತ್ತಾರೆ. ಅವರಿಗೆ ಏನೋ ವಿಶೇಷ ತೋರಿತು, ಒಂದು ವಿಚಾರ ಅಂಕುರಿಸಿತು, ಅದನ್ನು ಆ ಟಿಕೀಟಿನ ಖಾಲಿ ಜಾಗದಲ್ಲಿ ಗೀಚಿ ಹಿರಿಯರ ಕೈಗೆ ಕೊಡುವುದುಂಟು.

ಕಾಗದದ ಮೇಲೆ ಮನುಷ್ಯ ಅಥವಾ ಒಂದು ಪ್ರಾಣಿಯ ಚಿತ್ರ ವನ್ನು ಮೇಲಿಂದ ಕೆಳಗೆ ಚಿತ್ರಿಸುತ್ತಾ ಬರುತ್ತಾರೆ; ಜಾಗವು ಕಡಮೆ ಯಾಗುತ್ತದೆ. ಆ ಬಗ್ಗೆ ಅವರು ಚಿಂತೆ ಮಾಡುವುದಿಲ್ಲ. ಮೇಲೆ ಚಿತ್ರಿಸಿದುದನ್ನು ಉಜ್ಜಿ ಪ್ರಮಾಣ ಸರಿಮಾಡಿ ಪುನರ್ರಚನೆಗೆ ತೊಡಗುವುದಿಲ್ಲ. ರಬ್ಬರನ್ನು ಉಪಯೋಗಿಸಿ ಉಜ್ಜುವ ತಿದ್ದುವ ಪ್ರಮೇಯಗಳು ಅವರಿಗೆ ಇರುವುದಿಲ್ಲ. ಬಾಕಿ ಇರುವ ಅಂಗ ಭಾಗಗಳನ್ನು ಉಳಿದಿರುವ ಅಷ್ಟೇ ಸ್ಥಳಾವಕಾಶದಲ್ಲಿ ಬಲುಚಿಕ್ಕ ದಾಗಿ ಮಾಡಿ ಮುಗಿಸುತ್ತಾರೆ. ಬಸ್ಸಿನೊಳಗೆ ಸ್ನೇಹಿತರು ಸಂಭಾ ಷಿಸುವುದನ್ನು ಚಿತ್ರಿಸುತ್ತಾರೆ. ಆಗ ಬಸ್ಸಿನ ಯಂತ್ರದ ಮುಂಭಾಗ ಅಡಿಭಾಗದ ಚಕ್ರಗಳು, ಮೇಲುಭಾಗದ ಕ್ಯಾರಿಯರಿನಲ್ಲಿ ಹಾಕಿದ ಸಾಮಾನುಗಳು ಎಲ್ಲವನ್ನೂ ಕಾಣಿಸುತ್ತಾರೆ, ಸಾರಾಂಶ:— ಎಲ್ಲಿ ಏನೇನು ಉಂಟು ಎಂದು ಅವರಿಗೆ ಗೊತ್ತಿರುವುದನ್ನೆಲ್ಲ ಹೇಳು ವುದು ಅವರ ಗುಣ. ಗಳಿಸಿದ ಜ್ಞಾನವನ್ನು ಚಿತ್ರವೆಂಬ ಗುರುತು

ಗಳಿಂದ ತಿಳಿಸುತ್ತಾರೆ. ಅಂಗಾಂಗ ಪ್ರಮಾಣಗಳಲ್ಲಿ ವ್ಯತ್ಯಾಸ ಇರುತ್ತವೆ, ಮಾತ್ರವಲ್ಲ, ಕೈ ಕಾಲು ಬೆರಳುಗಳ ಸಂಖ್ಯೆಯಲ್ಲೂ ತಪ್ಪುಗಳು. ಹುಲಿಯ ಚಿತ್ರ ಮಾಡುತ್ತಾರೆ, ಆಕಾರ ಸಾದೃಶ್ಯ ಕೇಳಬೇಡಿರಿ. ಆ ಚಿತ್ರದಲ್ಲಿ ನೀಲ ಮತ್ತು ಹಳದಿ, ಕೆಂಪು ಅಥವಾ ಕಪ್ಪು ಪಟ್ಟಿಗಳನ್ನು ಬಲವಾಗಿ ಎಳೆಯುತ್ತಾರೆ. ಆ ಬಣ್ಣದ ಪಟ್ಟೆಗಳೇ ಅವರ ಹುಲಿ.

ಹಾಗಾದರೆ ಮಕ್ಕಳ ಚಿತ್ರಗಳಲ್ಲಿ ಕಲೆಯ ಗುಣ ಏನಿದೆ ? ತನ್ನ ಭಾವನೆಯ ಮುಖ್ಯಾಂಶಗಳನ್ನು ಆರಿಸಿ ಸೂಚಿಸುವುದು ಕಲೆಯ ಮುಖ್ಯ ಗುಣವಲ್ಲವೆ ? ಹೆಚ್ಚು ಮಂದಿ ನಿಂತ ಸಾಲಿನಲ್ಲಿ ಒಂದು ದನವು ಅಡ್ಡವಾಗಿರುವಾಗ ದನದ ದೇಹದ ಕೆಳಗಿನಿಂದ ಕಾಣುವ ಜುಮಲಾ ಕಾಲುಗಳ ಸಂಖ್ಯೆಯನ್ನು ಕಡಮೆ ಮಾಡಿ ಕೆಲವನ್ನೇ ಚಿತ್ರಿಸಿರುವುದನ್ನು ಶ್ರೇಷ್ಠ ಕಲಾವಿದರ ಚಿತ್ರಗಳಲ್ಲಿ ನಾವು ಕಾಣಬಹುದು. " ಅವರೆಲ್ಲರ ಕಾಲುಗಳನ್ನು ಲೆಕ್ಕಿಸಿ ಚಿತ್ರಿಸಿದರೆ ಅಲ್ಲಿ ಗೆರೆಗಳ ಸಂಖ್ಯೆಯು ಅಧಿಕವಾಗುತ್ತದೆ. ಆ ರೇಖೆಗಳ ರಾಶಿಯಿಂದ ಚಿತ್ರವು ಅಸಹ್ಯವಾಗುತ್ತದೆ. ಆದುದರಿಂದ ಕಾಲುಗಳ ಸಂಖ್ಯೆಯನ್ನು ಕಡಮೆ ಮಾಡಲಾಗಿದೆ " ಎಂಬುದಾಗಿ ಹಿರಿಯ ಕಲಾವಿದರು ಸಮಾಧಾನ ಹೇಳುತ್ತಾರೆ. ಮಕ್ಕಳು ಹಾಗೆ ಕಾರಣ ತಿಳಿಸಲಾರರು.

ಒಬ್ಬನು ಒಂದು ಮಗುವಿನೊಡನೆ " ನೀನು ಚಿತ್ರಗಳನ್ನು ಹೇಗೆ ಮಾಡುತ್ತಿ ? " ಎಂಬುದಾಗಿ ಕೇಳಿದನಂತೆ, ಅದಕ್ಕೆ ಆ ಮಗುವು " ಹೋ ! ಅದು ಗೊತ್ತಿಲ್ಲವೆ ನಿನಗೆ ? ಒಂದು ಆಲೋಚನೆ ಮಾಡುತ್ತೇನೆ, ಕಾಗದದ ಸುತ್ತಲೂ ಗೆರೆ ಎಳೆದು ತೋರಿಸುತ್ತೇನೆ " ಎಂದು ಜವಾಬು ಹೇಳಿತಂತೆ. ಅರ್ಥಗರ್ಭಿತವಾದ ನುಡಿ ಇದು.

ಮನುಷ್ಯ ಚಿತ್ರಗಳು ಪ್ರಕೃತಿಯಲ್ಲಿ ಸಮೀಪದ್ದು ದೊಡ್ಡ

ದಾಗಿಯೂ, ದೂರದ್ದು ಚಿಕ್ಕದಾಗಿಯೂ ತೋರುತ್ತವೆ. ಆ ಯಥಾ ದೃಷ್ಟರೂಪಣ ನಿಯಮ ನಿರ್ಬಂಧಗಳು ಮಕ್ಕಳ ಚಿತ್ರಗಳನ್ನು ಬಾಧಿಸುವುದಿಲ್ಲ. ಅವರ ಚಿತ್ರಗಳಲ್ಲಿ ಪ್ರಧಾನವಾದುದನ್ನು ದೊಡ್ಡ ಗಾತ್ರದ್ದಾಗಿ ಮಾಡುತ್ತಾರೆ. ಮನುಷ್ಯನಲ್ಲಿ ಮುಖ್ಯವಾದ ಅಂಗವು ತಲೆ. ಅದನ್ನು ದೊಡ್ಡದಾಗಿ ಚಿತ್ರಿಸುತ್ತಾರೆ. ಹಿಂದೆ ನಮ್ಮ ಚಿತ್ರಕಲೆಯಲ್ಲಿ ವಿಗ್ರಹ, ಉತ್ಕೀರ್ಣಶಿಲ್ಪಗಳಲ್ಲಿ ಕೂಡ ಮಹಾತ್ಮ ರನ್ನು ದೊಡ್ಡದಾಗಿಯೂ, ಸಾಮಾನ್ಯರನ್ನು ಚಿಕ್ಕದಾಗಿಯೂ ತೋರಿಸಿದ ಉದಾಹರಣೆಗಳು ದೊರೆಯುತ್ತವೆ. ಸ್ವಲ್ಪ ದೊಡ್ಡ ಮಕ್ಕಳ ಚಿತ್ರಗಳಲ್ಲಿ ತಲೆಗಾಗಿ ಒಂದು ವೃತ್ತ, ಮೈಯೊಂದು ಅಂಡಾಕಾರ, ಕೈ ಕಾಲುಗಳು ಕಡ್ಡಿಯಂತೆ, ನೇರ ಗೆರೆಗಳು, ಅವು ಗಳ ತುದಿಗಳಲ್ಲಿ ಬೆರಳುಗಳನ್ನು ಸೂಚಿಸಲು ತುಂಡು ಗೆರೆಗಳನ್ನು ಕಾಣಬಹುದು. ದೊಡ್ಡವರಾದಮೇಲೆ ಕೈಕಾಲುಗಳ ದಪ್ಪ ತೋರಿಸ ಲೆಂದು ಎರಡೆರಡು ಗೆರೆ ಎಳೆಯುತ್ತಾರೆ. ತೀರಾ ಚಿಕ್ಕವರಾದರೆ ಮೈಯೆಂದು ಅಂಡಾಕಾರ ಕೂಡ ಇರುವುದಿಲ್ಲ. ಅವರ ಚಿತ್ರಗಳಲ್ಲಿ ತಲೆಗೆ ತಾಗಿ ಕಾಲಿನ ಗೆರೆಗಳು ಮಾತ್ರ. ಕೈಗಳಿಗಿಂತ ಕಾಲು ಗಳನ್ನೇ ಮೊದಲು ಗಮನಿಸುತ್ತಾರೆ ಮುಖಗಳೆಲ್ಲವೂ ಸಾಮಾನ್ಯ ವಾಗಿ ಇದಿರು ಮುಖಗಳು. ಆದರೆ ಪಾದಗಳನ್ನು ಮಾತ್ರ ಬದಿ ಗಳಿಗೆ ತಿರುಗಿರುವಂತೆ ತೋರಿಸುತ್ತಾರೆ. ಇದಿರು ಮುಖ ಬಿಡಿಸಿ ದಾಗ ಪಾದಗಳನ್ನು ಕೂಡ ಇದಿರಿನಿಂದ ನೋಡುವಾಗ ಅವು ತೋರುವಂತೆ ಚಿತ್ರಿಸಬೇಡವೇ ? ಸ್ವಲ್ಪ ದೊಡ್ಡವರಾದಮೇಲೆ ಬದಿ ಮುಖ ತೋರಿಸತೊಡಗಿದರೂ ಅವರಲ್ಲಿ ದೋಣಿಯಾಕಾರದ ಇಡೀ ಕಣ್ಣನ್ನು ಚಿತ್ರಿಸುತ್ತಾರೆ. ಆ ಪ್ರಕಾರ ಕಣ್ಣುಗಳು ತುದಿಯಿಂದ ತುದಿಗೆ ಪೂರ್ತಿಯಾಗಿ ಕಾಣುವುದು ಇದಿರು ಮುಖದಲ್ಲಿ ಮಾತ್ರ ವಲ್ಲವೆ ? ಮಕ್ಕಳು ಚಿತ್ರಗಳಲ್ಲಿ ಹಾಗೆಲ್ಲ ತಪ್ಪುಗಳನ್ನು ಮಾಡು

ತ್ತಾರೆಂದು ವಯಸ್ಕರು ದೋಷಾರೋಪಣೆ ಮಾಡುತ್ತಾರೆ. ಆದರೆ ಮಕ್ಕಳ ಮೇಲೆ ತಪ್ಪುಗಳೆಂದು ಆರೋಪಣೆ ಮಾಡುವ ಇಂತಹ ಕೆಲವು ಆಕೃತಿಗಳು ಪುರಾತನ ಕಾಲದಿಂದಲೂ ಐಗುಪ್ತದೇಶದ ಚಿತ್ರಗಳಲ್ಲಿ ಪರಂಪರೆಯಾಗಿ ಬಂದಿರುತ್ತವೆ. ಅದನ್ನು ಒಂದು " ಶೈಲಿ " ಎಂದು ಪ್ರಶಂಸಿಸುತ್ತೇವೆ. ಮಕ್ಕಳು ಆ ಎಲ್ಲಾ ಅಂಗ ಗಳ ಸುಲಭವಾದ ಆಕಾರಗಳನ್ನು ಸುಲಭವಾಗಿ ಹೆಕ್ಕಿ ಚಿತ್ರಿಸು ತ್ತಾರೆ. ಕೆಲವು ಅಂಗಗಳ ಆಕೃತಿಗಳು ಇದಿರಿನಿಂದ ನೋಡುವಂತೆ ಚಿತ್ರಿಸಲು ಸುಲಭವಾಗಿವೆ.

ಉದಾ:—ಕಣ್ಣು, ಬಾಯಿ, ಕಿವಿ, ಎದೆ ಮೊದಲಾದುವುಗಳು- ಇನ್ನು ಕೆಲವು ಬದಿಯಿಂದ ನೋಡುವಾಗ ತೋರುವಂತೆ ಚಿತ್ರಿಸಲು ಸುಲಭವಾಗಿವೆ. ಉದಾ:—ಮೂಗು, ಪಾದ ಮೊದಲಾದುವುಗಳು.

ಮಕ್ಕಳು ಹೇಳಬೇಕಾದುದನ್ನು ಸರಳ ಹಾಗೂ ಸುಲಭವಾದ ಆಕಾರಗಳಿಂದ ಚಿತ್ರಿಸಿ ಸೂಚಿಸುತ್ತಾರೆ. ದೊಡ್ಡವರಾದಮೇಲೆ ಇಜಾರು, ಧೋತಿ ಸೂಚಿಸಿ ಗಂಡಸೆಂದೂ, ಬಳೆ, ಸೀರೆ ಮೊದಲಾದ ವುಗಳನ್ನು ಸೂಚಿಸಿ ಹೆಂಗಸೆಂದೂ ತಿಳಿಯಪಡಿಸುತ್ತಾರೆ. ಅವರ ಎಲ್ಲಾ ಮನುಷ್ಯರಿಗೂ ಒಂದೇ ತರಹದ ಮುಖಗಳು. ಮಾಡುವ ಕೆಲಸಕಾರ್ಯಗಳಿಗೆ ಸಹಜವಾದ ಮೈಯ ಬಾಗುವಿಕೆ ನಿಲುವು ಗಳನ್ನು ತೋರಿಸುವುದಿಲ್ಲ; ಗೊಂಬೆಯಂತೆ ನೇರ ಮೈಯ ಮೂರುತಿಗಳೇ ಹೆಚ್ಚು. ಆದರೆ ಕೈಗಳನ್ನು ಮಾತ್ರ ಬೇಕಾದ ಕಡೆ ಓರೆಮಾಡಿ ಚಿತ್ರಿಸಿ ಕೆಲಸ ಕಾರ್ಯ ಮಾಡುವುದನ್ನು ಸೂಚಿಸು ತ್ತಾರೆ. ಆ ಚಿತ್ರಗಳಿಂದ ಮಕ್ಕಳ ಊಹೆಗಳನ್ನು ಗ್ರಹಿಸಿ, ಮೆಚ್ಚಿ ಮತ್ತಷ್ಟನ್ನು ವ್ಯಕ್ತಗೊಳಿಸಲು ಪ್ರೋತ್ಸಾಹಿಸಬೇಕು. ನೈಜರೂಪ ಜ್ಞಾನವು ಬೇಡವೆಂದರೂ ಕ್ರಮೇಣ ತಾನಾಗಿ ಬರುವುದು. ಅದು ಗೌಣ. ಅದರ ಕಡೆ ಈಗಲೇ ಗಮನ ಹರಿಸಿದರೆ ತಪ್ಪುರೂಪವೆಂಬ

ಅಲ್ಪ ಲಾಭ ಬಯಸಿ ಭವಿಷ್ಯದಲ್ಲಿ ಜೀವನವನ್ನು ಬೆಳಗಬಲ್ಲ ಕಲ್ಪನಾಶಕ್ತಿ ಮೊದಲಾದ ಅಮೂಲ್ಯ ಗುಣಗಳನ್ನು ಬೆಳೆಯು ಗೊಡದೆ ಮಕ್ಕಳ ಶ್ರೇಯಸ್ಸಿಗೆ ಅಹಿತವನ್ನೆಸಗಿದಂತಾಗುವುದು. ಹಕ್ಕಿ ಚಿತ್ರದಲ್ಲಿ-ಅದು ಕುಳಿತಿರುವ ಕಲ್ಲು,ಮರಗಳಿಗಿಂತ ಹಕ್ಕಿಯೇ ದೊಡ್ಡದು. ಏಕೆ ? ಅಲ್ಲಿ ಹಕ್ಕಿ ಮುಖ್ಯ. ಏನನ್ನು ಬೇಕಾದರೂ ಚಿತ್ರಿಸುತ್ತಾರೆ. ಯಾವ ಶಂಕೆ ಅನುಮಾನಗಳೂ ಅವರಿಗೆ ಇಲ್ಲ. ಹಿರಿಯರ ಚಿತ್ರದೃಷ್ಟಿ ಅವರಿಗೆ ಸೋಕಿದ್ದರೆ ಮಾತ್ರ ಆ ಗುಣವು ನಷ್ಟ ಹೊಂದಿರಬಹುದು. ಅಜ್ಜಿ ಕಥೆಗಳಲ್ಲಿ ಬರುವ ಯಾರೂ ಕಾಣದೆ ಇರುವ ದೈತ್ಯನನ್ನೊ, ಅವರದೇ ಆದ ವಿಮಾನಗಳನ್ನೋ ರಚಿಸುತ್ತಾರೆ. ಅದು ಅವರ ಸೃಷ್ಟಿ.

**ಒಂದು ರಸಭಾವ:**—ಒಬ್ಬ ಚಿಕ್ಕಹುಡುಗ ನೀರು ಕೊಡವನ್ನು ಹೊತ್ತು ಕೊಂಡು ಬರುವ ಮಹಿಳೆಯ ಚಿತ್ರವನ್ನು ರಚಿಸಿದ. ಮಕ್ಕಳ ಚಿತ್ರಗಳಲ್ಲಿ ಆಕಾಶದಲ್ಲಿ ಸೂರ್ಯನು ಇದ್ದೇ ಇರುತ್ತಾನೆ. ಒಂದು ವೃತ್ತಾಕಾರಮಾಡಿ ಸುತ್ತಲೂ ಕಿರಣಗಳೆಂದು ತುಂಡುಗೆರೆಗಳನ್ನು ಎಳೆದು ಸೂರ್ಯನೆಂಬುದಾಗಿ ಹೇಳುತ್ತಾರೆ. ಕೆಲವೇ ನಿಮಿಷಗಳಲ್ಲಿ ಈ ಬಾಲಕನಿಗೆ ಮತ್ತೊಂದು ಯೋಚನೆ ತಟ್ಟೆಂದು ಹೊಳೆಯಿತು. ಅನಂತರ ತಡಮಾಡಲಿಲ್ಲ. ಅವಸರದಿಂದ ಆ ಹೆಂಗಸಿಗೂ ಸೂರ್ಯನಿಗೂ ನಡುವಿನಲ್ಲಿ ಒಂದು ಮರವನ್ನು ಚಿತ್ರಿಸಿದ, ಅದನ್ನೇಕೆ ಮಾಡಿದಿ ? ಎಂದು ಕೇಳಿದಾಗ ಅವನ ಜವಾಬು:—"ಪಾಪ ಅಲ್ಲಿ ನೋಡಿ ಸೂರ್ಯ, ಅವಳ ತಲೆಯಮೇಲೆ ಭಾರೀ ಬಿಸಿಲು ಬೀಳುತ್ತದೆ. ಅದರಿಂದ ಅವಳಿಗೆ ಕಷ್ಟವಾಗುತ್ತದೆ. ಆದುದರಿಂದ ನೆರಳಿಗಾಗಿ ಒಂದು ಮರ ಮಾಡಿದೆ." ಅವರ ಚಿತ್ರಗಳಲ್ಲಿ ಇಂತಹ ಸಹಾನುಭೂತಿ ರಸಭಾವಗಳನ್ನು ಗುರುತಿಸಬೇಕು. ಈ ಪ್ರಕಾರ ಅವರ ಕೃತಿಗಳಲ್ಲಿ ಕಂಡುಬರುವ ಪ್ರಾಣಿದಯೆ, ದಾಕ್ಷಿಣ್ಯ, ಪರೋಪಕಾರ

ಮೊದಲಾದ ಗುಣಗಳನ್ನು ಪ್ರೋಷಿಸಿ ಉತ್ತೇಜನ ಕೊಡಬೇಕು.

**ಮಕ್ಕಳ ಮತ್ತು ಆದಿಮಾನವ (Primitive) ಚಿತ್ರಕಲೆಗಳಲ್ಲಿ ಸಾಮ್ಯ.**

ಆದಿಮಾನವ ಚಿತ್ರಕಲೆ ಎಂದರೇನು ?

ಈಗಿನ ನಾಗರಿಕತೆಯನ್ನು ಸೋಂಕದವರು ರಚಿಸಿದ್ದ ಚಿತ್ರ ರಚನೆಗೆ ಆದಿಮಾನವ ಚಿತ್ರಕಲೆ ಎನ್ನುತ್ತೇವೆ ಅವರ ಚಿತ್ರಕಲೆಯು ದೃಶ್ಯಗುರುತುಗಳಿಂದ ಅವರ ಭಾಷೆಯಾಗಿದೆ. ಅವು ಹೆಚ್ಚಾಗಿ ಇತಿಹಾಸ ಪೂರ್ವದ ಜನರದ್ದಾಗಿದೆ. ಆದರೆ ಅತಿದೂರದ ಒಳನಾಡುಗಳಲ್ಲಿ ಈಗಲೂ ಕೆಲವು ಜನರು ಅಂಥವರು ಇದ್ದಾರೆ. ಬರಹ ಭಾಷೆಗಳಿಗಿಂತ ಮುಂಚೆಯೇ ಈ ಆದಿಮಾನವರ ಚಿತ್ರ ರಚನೆಗಳಿದ್ದವು. ಸುಮಾರು ೧೫-೨೦ ಸಾವಿರ ವರುಷ ಹಿಂದಿನ ದಾಖಲೆಗಳು ಬರೆದ ಭಾಷೆಯಲ್ಲಿ ಅಲ್ಲ, ಅವರ ಚಿತ್ರಗಳಲ್ಲಿ ದೊರೆಯುತ್ತವೆ. ಅವುಗಳು ಸ್ಪೇನ್, ಫ್ರಾನ್ಸ್, ಸಹರಾ ಮರುಭೂಮಿಯ ಗುಹೆಗಳಲ್ಲಿ ಇವೆ.

ಆದಿವಾಸಿಗಳು ಹೆಚ್ಚು ಪುರಾತನದವರಂತೆ ಅವರ ಸಂಕೇತಗಳು ಹೆಚ್ಚು ಗೂಢವಾಗಿವೆ. ಅವುಗಳಲ್ಲಿ ವಸ್ತುರೂಪದ ಛಾಯೆ ಕೂಡ ಇರುವುದಿಲ್ಲ. ಚುಕ್ಕೆಗಳು, ವೃತ್ತ, ಕುದುರೆಲಾಳದ ಆಕಾರ, ಅದರೊಳಗೆ ಮತ್ತೊಂದು ಲಾಳಾಕಾರ, ಈ ಗುರುತುಗಳಿಗೆಲ್ಲಾ ಅವರದ್ದೇ ಆದ ನಿರ್ದಿಷ್ಟ ಅರ್ಥಗಳಿವೆ. ಮಧ್ಯ ಆಸ್ಟ್ರೇಲಿಯಾದಲ್ಲಿ ಈಗಲೂ ಅಂಥ ಕಾಡುಜನರು ವಾಸವಾಗಿದ್ದಾರೆ. ನಾವು ಮರ, ದನ ಜೆಂಚು ಎಂದು ಬರೆಯುತ್ತೇವೆ. ಈ ಅಕ್ಷರ ಸಮೂಹದ ಆಕಾರಗಳಿಗೂ ವೃಕ್ಷ, ಹಸು, ವಸ್ತುಗಳ ಆಕಾರಗಳಿಗೂ ಏನಾದರೂ ಹೋಲಿಕೆಗಳು ಇವೆಯೆ ? ಆ ಅಕ್ಷರ ಸಮುದಾಯದ ರೂಪಗಳಿಂದ ಆ ವಸ್ತುಪ್ರಾಣಿಗಳನ್ನು ಅರಿಯಲು ಸಾಧ್ಯವೇ ? ನಮ್ಮ ಬರಹ

ಗಳಲ್ಲಿ ಆ ಗುರುತುಗಳೆಂದರೆ ಆ ವಸ್ತುಗಳು, ಆ ಪ್ರಾಣಿಗಳು ಎಂದು ಅರ್ಥ ಮಾಡಿಕೊಳ್ಳುವುದು ಅದೊಂದು ಒಡಂಬಡಿಕೆ ಅಲ್ಲವೇ ? ಹಾಗೆಯೇ ಮಕ್ಕಳ ಮತ್ತು ಆದಿವಾಸಿಗಳ ಚಿತ್ರಗಳೆಂಬ ಹೇಳಿಕೆ ಳಲ್ಲೂ ವಸ್ತುರೂಪ ಇಲ್ಲವೆಂದು ಧಿಕ್ಕರಿಸಬಾರದು. ಗುರುತುಗಳ ಮೂಲಕ ಅವರು ಇತರರಿಗೆ ಅಭಿಪ್ರಾಯ ತಿಳಿಸತೊಡಗಿದರು.

**ಅವರ ಚಿತ್ರರಚನಾ ಸಾದೃಶ್ಯಗಳಿಗೆ ಕಾರಣಗಳೇನಿರಬಹುದು ?**

ಮಕ್ಕಳ ಮತ್ತು ಆದಿವಾಸಿಗಳ ಚಿತ್ರರಚನೆಗಳು ಸಂಪೂರ್ಣ ಸಮಾನವಾಗಿವೆ ಎನ್ನುವುದಲ್ಲ. ಅವರ ಕೃತಿಗಳಲ್ಲಿ ಸೋಜಿಗವಾದ ಹೋಲಿಕೆಗಳು ಕಂಡುಬರುತ್ತವೆ. ಅವರಿಬ್ಬರೂ ವಸ್ತು ನೋಡಿ ಚಿತ್ರಿಸುವುದಿಲ್ಲ; ಕಲ್ಪನೆಯಿಂದಲೇ ಚಿತ್ರಿಸುತ್ತಾರೆ. ಅವರ ಚಿತ್ರ ಗಳೆಂದರೆ ಗುರುತುಗಳಿಂದ ಅವರ ಅನುಭವ ಪರಂಪರೆಯನ್ನು ಅರು ಹಿದ್ದಾಗಿದೆ. ನಮ್ಮ ಇದಿರಿನಲ್ಲಿ ಹೊಸತಾದ ಚಿತ್ರವಿಚಿತ್ರ ಪ್ರಪಂಚ ವನ್ನೆ ನಿರ್ಮಿಸಿ ತೋರಿಸುತ್ತಾರೆ. ಆದಿಮಾನವರಾಗಲಿ ಮಕ್ಕ ಳಾಗಲೀ ಅದು ಚಿತ್ರಕಲೆ ಎಂಬ ಭಾವನೆ ಇಲ್ಲದೆ ರಚಿಸುವುದರಿಂದ ಅದೇ ಶುದ್ಧವಾದ ಕಲೆ ಅನ್ನುವವರೂ ಇದ್ದಾರೆ. ಏನೇ ಆಗಲಿ. ಅವರ ಚಿತ್ರಗಳಲ್ಲಿ ಒಂದು ಶಕ್ತಿ ಇರುತ್ತದೆ; ಓಜಸ್ಸಿರುತ್ತದೆ, ಇದನ್ನು ಎಲ್ಲರೂ ಒಪ್ಪುತ್ತಾರೆ. ಮಕ್ಕಳ ಚಿತ್ರಗಳನ್ನು ನೋಡು ವಾಗ ಆದಿಮಾನವರ ಚಿತ್ರಗಳನ್ನು ನೋಡುತ್ತಿರುವಂತೆ ಭಾಸ ವಾಗುತ್ತದೆ, ಇಬ್ಬರಿಗೂ ತಮ್ಮ ಭಾವನೆಗಳನ್ನು ತೋಡಿಕೊಳ್ಳುವ ಬಯಕೆ. ಅವರಿಗೆ ಭಾಷೆಯೇ ಅಮೂರ್ತ, ತಿಳಿಸಲು ಕಷ್ಟ. ಅದನ್ನು ದೃಶ್ಯರೂಪದಲ್ಲಿ ಎಂದರೆ ಚಿತ್ರಭಾಷೆಯಲ್ಲಿ ಅರುಹಲು ಸುಲಭ. ಅದು ಅವರ ಸಹಜ ಗುಣವಾಗಿದೆ.

ಅವರ ಚಿತ್ರರೂಪಗಳು ಹೇಗಿರುತ್ತವೆ ? ಅವರ ಚಿತ್ರಗಳಲ್ಲಿ

ಪರಸ್ಪರ ಪ್ರಮಾಣಗಳು ನೈಜವಾಗಿರುವುದಿಲ್ಲ. ಇಬ್ಬರಲ್ಲೂ ಕೆಂಪು ಮತ್ತು ಹಳದಿ ಹೆಚ್ಚು ಬಳಕೆಯ ಬಣ್ಣಗಳಾಗಿವೆ, ಹತ್ತಿರ ದೂರಗಳ ಬೆಸೆಯಿಂದ ವಸ್ತುಗಾತ್ರಗಳು ಹೆಚ್ಚು ಕಡಮೆಯಾಗಿ ಕಾಣಿಸುವ ಯಥಾದೃಷ್ಟರೂಪ ದರ್ಶನ [Perspective] ಇರುವುದಿಲ್ಲ. ಪ್ರಮುಖವೆಂಬುದಾಗಿ ತಾವು ಭಾವಿಸಿದುದನ್ನು ಗಾತ್ರದಲ್ಲಿ ದೊಡ್ಡದು ಮಾಡಿ ತೋರುವುದು, ಅದಕ್ಕೆ ವಿಶೇಷ ಬಣ್ಣ ಹಾಕುವುದು ಅವರ ರೀತಿ. ಆಲೋಚನೆಗಳನ್ನು ಗುರುತುಗಳಿಂದ ಫಲಕಗಳ ಮೇಲೆಲ್ಲಾ ಇಡುವುದು ಅವರ ಗುರಿ. ನಾವು ಲೇಖನ ಬರೆದಂತೆ ಅವರ ಪಾಲಿಗೆ ಚಿತ್ರ ಬರೆಯುವುದಾಗಿದೆ.
[to write a picture]

ಗದ್ದೆ, ಕೆರೆಗಳನ್ನು ಆಯತ ಅಥವಾ ಚೌಕಗಳಾಗಿಯೇ ಚಿತ್ರಿಸುತ್ತಾರೆ. ಸರೋವರ ಅಥವಾ ನೀರಿನ ಹೊಂಡಗಳು ಯಾವಾಗಲೂ ಗೋಳಾಕಾರ ಅಥವಾ-ವೃತ್ತಾಕಾರ. ಅವರು ನೆಲದಮೇಲೆ ನಿಂತು ನೋಡುವವರಿಗೆ ಅದು ತೋರುವಂತೆ ಅವುಗಳನ್ನು ಚಿತ್ರಿಸುವುದಿಲ್ಲ. ವಿಮಾನವನ್ನೇರಿ ಮೇಲಿನಿಂದ ಕೆಳಗೆ ನೋಡಿದರೆ ಅವು ಹೇಗೆ ಕಾಣಿಸುತ್ತವೆಯೋ ಹಾಗೆ ಚಿತ್ರಿಸುತ್ತಾರೆ. ಏಕೆಂದರೆ ಗದ್ದೆಗಳ ಆಕೃತಿಗಳು ಆಯತಗಳೆಂದೂ, ಸರೋವರಗಳ ಆಕೃತಿಗಳು ವೃತ್ತಗಳೆಂದೂ ಅವರಿಗೆ ಗೊತ್ತು. ಅವರಿಬ್ಬರ ಚಿತ್ರಗಳಲ್ಲೂ ಚೌಕ ಮತ್ತು ಆಯತ ವಸ್ತುಗಳ ಗೆರೆಗಳು ಲಂಬಕೋನವಾಗಿಯೇ ಇರುತ್ತವೆ. ಲಘುಕೋನ ಅಥವಾ ವಿಶಾಲ ಕೋನಗಳಾಗಿ ಅವರು ಚಿತ್ರಿಸುವುದು ವಿರಳ. ಬದಿಮುಖದಲ್ಲೂ ಎರಡು ಕಣ್ಣುಗಳನ್ನು ಚಿತ್ರಿಸುತ್ತಾರೆ. ಒಂದು ಪ್ರಾಣಿಯ ಮೇಲೆ ಕುಳಿತವನ ಎರಡೂ ಕಾಲುಗಳನ್ನೂ ಒಂದೇ ಕಡೆ ನಮಗೆ ತೋರುವಂತೆ ರಚಿಸುತ್ತಾರೆ. ಅವು ಅಷ್ಟು ಅಲ್ಲಿ ಉಂಟು ಎಂಬುದು ಅವರ ತಿಳುವಳಿಕೆ ಮತ್ತು

ಹೇಳಿಕೆಗಳು ಆಗಿವೆ. ಅವುಗಳನ್ನು ಅಸಂಬದ್ಧ ಎನ್ನುವಿರಾ? ಈಗ ನವ್ಯ ಚಿತ್ರಗಳಲ್ಲೂ ಹಾಗೆಲ್ಲಾ ಚಿತ್ರಿಸುವುದನ್ನು ಕಾಣುವುದಿಲ್ಲವೇ? ಅವಕ್ಕಾಗಿ ಕಾರಣಗಳನ್ನು ವಿವರಿಸಿ ಹೇಳುತ್ತಾರೆ. ನಾವು ಮೆಚ್ಚುತ್ತೇವೆ. ಆದರೆ ಮಕ್ಕಳು ಮತ್ತು ಆದಿವಾಸಿಗಳು ಹಾಗೆ ಕಾರಣಗಳನ್ನು ವಿವರಿಸುವವರಲ್ಲ. ಹೇಳಲಾಗದ ಒಂದು ಅಂತರ್ಜ್ಞಾನ, ಆತ್ಮಪ್ರೇರಣೆಯು ದೆಸೆಯಿಂದ ಅವರ ರಚನೆಗಳು ಆ ಪ್ರಕಾರ ಆಗಿರುತ್ತವೆ. ಮಕ್ಕಳು ಪಾತ್ರೆ ಲೋಟ ಮೊದಲಾದುವುಗಳನ್ನು ಚಿತ್ರಿಸುವಾಗ ಮೇಲಿನ ಬಾಯಿಯನ್ನು ವೃತ್ತವಾಗಿ ರಚಿಸುತ್ತಾರೆ. ಲೋಟದ ಬಾಯಿ ವೃತ್ತಾಕಾರವೆಂಬುದು ಅವರಿಗೆ ಗೊತ್ತು. ಮೇಲೆ ಉರುಟಾಗಿ ಬಿಡಿಸಿದಾಗ ಬುಡದಲ್ಲಿ ಕೂಡ ವೃತ್ತವಾಗಿ ರಚಿಸಬೇಕು. ಆದರೆ ಅವರು ಹಾಗೆ ಮಾಡದೆ ತಳವನ್ನು ಅಡ್ಡಗೆರೆ ಎಳೆದು ತೋರಿಸುತ್ತಾರೆ. ಅದು ಹೇಗೆ ಆಗಬೇಕು ಎಂಬ ನೈಜ ಆಕಾರವ ಕುರಿತು ಅವರು ತತ್ಪರರಲ್ಲ. ಈಜಿಪ್ಟಿನ ಗತಕಾಲದ ಕಲಾಕೃತಿಗಳಲ್ಲೂ ಅದೇ ಶೈಲಿಯು ಕಂಡುಬರುತ್ತದೆ. ಅಡಿ ಇರುವ ಹರಿವಾಣವನ್ನು ಉರುಟಾಗಿ ಮಾಡದೆ ಅಡ್ಡಗೆರೆ ಎಳೆದು ಚಿತ್ರಿಸಿದ್ದಾರೆ. ಹರಿವಾಣದಲ್ಲಿ ಇಟ್ಟಿರುವ ರೊಟ್ಟಿಗಳನ್ನು ತೋರಿಸಲು ಅದರಮೇಲೆ ಪೂರ್ಣವೃತ್ತಗಳನ್ನು ರಚಿಸಿದ್ದಾರೆ. ಹೀಗೆ ಅವರ ಚಿತ್ರಗಳನ್ನು ತಿಳಿಯಲು ಅನುಭವ ಸಹೃದಯತೆಯ ಗುಣಗಳು ಬೇಕು.

ಪೌರ್ವಾತ್ಯವಾಗಲಿ ಪಾಶ್ಚಾತ್ಯವಾಗಲಿ ಜಗತ್ತಿನ ಎಲ್ಲಾ ರಾಷ್ಟ್ರಗಳ ಮಕ್ಕಳ ಚಿತ್ರಗಳಲ್ಲೂ ಆಶ್ಚರ್ಯಕರವಾದ ಸಾಮ್ಯಗಳಿರುತ್ತವೆ. ಮನುಷ್ಯನ ಚಿತ್ರ ರಚಿಸಲು ದೂರದೂರ ದೇಶಗಳ ಮಕ್ಕಳಿಗೆಲ್ಲ ಸಮಾನವಾದ ಒಂದೇ ಸೂತ್ರವಿರುತ್ತದೆ. ಆ ಮುಗ್ಧ ಹೃದಯದ ಮಕ್ಕಳ ಕೃತಿಗಳಿಗೂ ಗವಿಮಾನವರ ಕೃತಿಗಳಿಗೂ ಇರುವ

ಸಾದೃಶ್ಯಗಳನ್ನು ಪರಿಶೀಲಿಸಿದರೆ ಭಾವಾಭಿವ್ಯಕ್ತಿಗಾಗಿ ಸಂಕೇತ ಗಳೂ ಮತ್ತು ಮೂರುತಿ ನಿರ್ಮಾಣಗಳೂ ಮನುಷ್ಯ ಕುಲದಲ್ಲಿ ಅಂತರ್ಗತವಾಗಿರುವ ಗುಣಗಳೆಂದು ಭಾಸವಾಗುತ್ತದೆ.

ಮಕ್ಕಳಮೇಲೆ ಬುಡಕಟ್ಟು ಅಥವಾ ವಂಶದ ಪ್ರಭಾವವು ಪರಿ ಣಾಮ ಬೀರುತ್ತದೆ. ಆಫ್ರಿಕಾದ ಒಂದು ಬುಡಕಟ್ಟಿನ ಮಕ್ಕಳಿಗೆ ಬಳಪ, ಬಣ್ಣ ಒದಗಿಸಿದಾಗ ಚಿತ್ರಿಸಲು ಕಷ್ಟವಾಯಿತು. ಆ ಕಡೆ ಅವರ ಒಲವು ಇರಲಿಲ್ಲ. ಆದರೆ ಆ ಮಕ್ಕಳಿಗೆ ಕೊರೆಯುವ ಗೀರುವ ಉಪಕರಣಗಳನ್ನು ಕೊಟ್ಟಾಗ ಅವರು ಚಿತ್ರ ರಚಿಸಿದರು. ಮರದ ಮೇಲೆ ಚೂರಿಯಿಂದ ಕೆತ್ತಿ, ಗೀರಿ ರಚನೆಮಾಡುವುದು ಅವರಿಗೆ ಸಹಜ ಸುಲಭವಾಗಿತ್ತು.

ಒಮ್ಮೆ ಪರೀಕ್ಷಾರ್ಥವಾಗಿ ಫೋಟೋಗ್ರಾಫುಗಳನ್ನೂ ಮತ್ತು ತದ್ರೂಪ ಚಿತ್ರಗಳನ್ನೂ ಮಕ್ಕಳಿಗೂ, ಹಳ್ಳಿಯವರಿಗೂ ಅತ್ಯಂತ ಕಾಡುಜನರಿಗೂ ಪ್ರದರ್ಶಿಸಲಾಯಿತು. ಆಗ ಅವರೆಲ್ಲರೂ ಆ ಚಿತ್ರಗಳನ್ನು ಏನೆಂದು ಗುರುತಿಸಲಿಲ್ಲ. ಆದರೆ ಅವರೆಲ್ಲರೂ ಸಹಜ ವಾಗಿ ರಚಿಸುವಂಥ ಚಿತ್ರಗಳನ್ನು ತೋರಿಸಿದಾಗ ಅವು ಏನೆಂದು ಅವರಿಗೆ ಅರ್ಥವಾಯಿತು. ಆ ರಚನೆಗಳು ಅವರ ದೃಷ್ಟಿ ಮತ್ತು ಅನುಭವಗಳು ಆಗಿದ್ದವು.

ಆದಿಮಾನವ ಮತ್ತು ಇಂದಿನ ಮಕ್ಕಳ ಚಿತ್ರರಚನೆಗಳಲ್ಲಿ ವ್ಯತ್ಯಾಸ ಹೇಳುವುದಾದರೆ ಆದಿಮಾನವರಿಗೆ ಉಪಕರಣಗಳ ಬಳಕೆ ಯ ಮೇಲೆ ಹಿಡಿತ, ತಿಳುವಳಿಕೆಗಳು ಇದ್ದವು. ಮಕ್ಕಳಿಗೆ ಸಾಧನ ಸಾಮಗ್ರಿಗಳನ್ನು ಬಯಸುವ ವಿಧಾನದಮೇಲೆ ಆ ಪ್ರಕಾರ ಹಿಡಿತ ವಿಲ್ಲ. ಆದರೂ ಅನಾದಿಕಾಲದ ಗವಿಮಾನವರ ಮತ್ತು ಈಗಿನ ಚಿಕ್ಕಮಕ್ಕಳ ಚಿತ್ರರಚನೆಗಳಲ್ಲಿ ಕಂಡುಬರುವ ಸಾಮ್ಯವು ಸೋಜಿಗವಾಗಿದೆ.

## ವಯಸ್ಸಿಗನುಗುಣವಾಗಿ ಮಕ್ಕಳ ಮಾನಸಿಕ ಬೆಳವಣಿಗೆಯ ಹಂತಗಳು

ಮಕ್ಕಳ ಮಾನಸಿಕ ಬೆಳವಣಿಗೆಯು ಕೆಲವು ನಿರ್ದಿಷ್ಟ ಹಂತಗಳನ್ನು ಕಳೆದೇ ಸಾಗುತ್ತದೆ. ಚಿತ್ರಕಲೆಯಲ್ಲಿ ಅದು ಗೀಚುವಿಕೆಯಿಂದ ಆರಂಭವಾಗುವುದು; ಅಭಿಪ್ರಾಯ ಸೂಚಿಸಲು ಗುರುತುಗಳನ್ನು ಉಪಯೋಗಿಸುವುದು; ಮುಖ್ಯಾಂಶ ಸೂಚಿಹಂತ [Schematic] ದ ಮೂಲಕ ಸಾಗುವುದು. ಅನಂತರ ಬಾಲ್ಯದ ಸರಳತೆಯು ನಶಿಸುವುದು. ಯಥಾಪ್ರತಿ ತೆಗೆಯುವ ಗುಣವು ಬೆರಕೆಯಾಗುವುದು; ಮುಂದರಿದು ತೋರ್ಕೆಯ ನೈಜಹಂತದ ಕಡೆಗೆ ಸಾಗುವುದು. ಕೊನೆಗೆ ವಯಸ್ಕರ ಕಲೆಯ ಹಂತಕ್ಕೆ ತಲುಪುವುದು. ಈ ನೈಸರ್ಗಿಕ ಗುಣಗಳಿಗನುಗುಣವಾಗಿ ಕಲಾಶಿಕ್ಷಣವನ್ನು ನೀಡಬೇಕೆಂದು ಸಾಮಾನ್ಯ ೮೦ ವರುಷಗಳಿಂದೀಚೆಗೆ ಮನಶ್ಶಾಸ್ತ್ರಜ್ಞರು ಒಮ್ಮತಾಭಿಪ್ರಾಯ ಪಟ್ಟಿದ್ದಾರೆ. ಅದೇ ಕಾಲದಲ್ಲಿ ಅಮೇರಿಕಾ ಮತ್ತು ಯೂರೋಪಿನ ಕೆಲವು ದೇಶಗಳಲ್ಲಿ ಕಲಾಶಿಕ್ಷಣದಲ್ಲಿ ಆಸಕ್ತಿಇದ್ದ ಶಾಲಾಧ್ಯಾಪಕರು ಕೂಡ ಈ ಸತ್ಯಾಂಶವನ್ನು ತಾವಾಗಿ ಮನಗಂಡಿದ್ದು ಆ ಬಗ್ಗೆ ಸೂಕ್ತವಾದ ಕಾರ್ಯವಿಧಾನಗಳನ್ನು ಕಂಡುಹಿಡಿಯಲು ಸಂಶೋಧನಾ ಪ್ರಯೋಗಗಳನ್ನು ಮಾಡುತ್ತಿದ್ದರು. ಈ ಚಿಕ್ಕಮಕ್ಕಳ ಚಿತ್ರಕಲಾಶಿಕ್ಷಣ ಪದ್ಧತಿಯು ಆ ಪ್ರಕಾರ ಮನಶ್ಶಾಸ್ತ್ರಜ್ಞರು ಮತ್ತು ಅಧ್ಯಾಪಕರ ಸಂಶೋಧನೆ ಹಾಗೂ ಅನುಭವಗಳ ಫಲವಾಗಿದೆ.

"ಮಗುವು ವಸ್ತುವನ್ನು ಹಿಡಿಯಬಲ್ಲೊಡನೆ ಎಂದರೆ ಒಂದು ವರುಷವಾಗುವಾಗ ಬಣ್ಣದ ಬಳಪವನ್ನು ಅದರ ಕೈಗೆ ಕೊಟ್ಟು ಪರಿಶೀಲಿಸಿದರೆ ಅದು ತುಂಡುಗೆರೆಗಳನ್ನೂ, ಗೀಚುಗಳನ್ನೂ ಎಳೆಯುವುದನ್ನು ನೋಡಬಹುದು. ಅದು ಆರಂಭದ ಪಾಠ. ಕಾಗದದ ಮೇಲೆ

ಆ ಗುರುತುಗಳನ್ನು ನೋಡಿ ಅವರಲ್ಲಿ ಆಸಕ್ತಿ ಹೊಂದುವುದು. ಅನಂತರ ತರಂಗ ಬದ್ಧವಾದ ಪುನರಾವರ್ತನೆಯ ಗೀಚುವಿಕೆಗಳನ್ನು ರಚಿಸುತ್ತದೆ. ಮುಂದುವರಿದು ಇನ್ನಷ್ಟು ಗೆರೆಗಳನ್ನು ನಿರ್ಮಿಸುತ್ತದೆ. ಈ ರೇಖಾ ಜಾಲದಲ್ಲಿ ಮಗುವು ಆಕಸ್ಮಾತ್ತಾಗಿ ಕೆಲವು ಆಕಾರಗಳನ್ನು ಕಾಣುತ್ತದೆ. ಅಲ್ಲಲ್ಲಿ ಒಂದೊಂದು ವೃತ್ತ, ರೇಖೆಗಳಲ್ಲಿ ತನ್ನ ತಾಯಿಯ ಮುಖವು ಅದಕ್ಕೆ ಗೋಚರಿಸುತ್ತದೆ. ಇತರ ಗೆರೆಗಳಲ್ಲಿ ಮನೆ ಮಾರ್ಗ, ಮರ ರಸ್ತೆ ಕಾಣಿಸುತ್ತವೆ. ಒಂದೆರಡು ಗೆರೆಗಳನ್ನು ಅಲ್ಲಲ್ಲಿ ಕೂಡಿಸಲು ಆ ಆಕೃತಿಗಳು ಅದಕ್ಕೆ ಮತ್ತಷ್ಟು ಹಿತಕರವಾಗುತ್ತದೆ. ಹೀಗೆ ಆಕಸ್ಮಾತ್ತಾಗಿ ನಿರ್ಮಿತವಾದ ಪ್ರತಿಬಿಂಬಗಳ ದೆಸೆಯಿಂದ ಹರುಷಗೊಂಡು ತನ್ನ ವಿಜಯಗಳನ್ನು, ಶೋಧನೆಗಳನ್ನು ಪುನರ್ರಚಿಸತೊಡಗುತ್ತದೆ." ಕಲಾ ಶಿಕ್ಷಣ ಕುರಿತು ಪರಿಶ್ರಮಪಟ್ಟು ಪರಿಶೀಲಿಸಿದ ಹರ್ಬರ್ಟ್‌ರೀಡನ ಮಾತುಗಳಿವು.

ವಯೋಮಾನಕ್ಕನುಗುಣವಾಗಿ ಮಕ್ಕಳ ಮಾನಸಿಕ ಬೆಳವಣಿಗೆಯಲ್ಲಿ ವಿವಿಧ ಹಂತಗಳಿವೆ. ಅವುಗಳಲ್ಲಿ ಮುಖ್ಯವಾಗಿ—

೧. ಶಿಶುತನದ ಗೀಚುವಿಕೆ, (೨ರಿಂದ ೫ ವರ್ಷದ ತನಕ)
Infant stage, The stage of manipulation, Scribble.

೨. ಸಂಕೇತ ಪ್ರಧಾನ—ಅಮೂರ್ತರೂಪ—(೫ ರಿಂದ ೮ ವರುಷದ ತನಕ) Abstract, Symbolic Stage.

೩. ಮುಖ್ಯಾಂಶಸೂಚಿ ಹಂತ, (೮ ರಿಂದ ೧೧ ವರುಷ ತನಕ)

೪. ತೋರ್ಕೆಯ ಸ್ವಜ ಹಂತ, (೧೧ ರಿಂದ ೧೪ ವರುಷ ತನಕ,)
The stage of Pseudo realism.

೫. ಸ್ವಜ ಹಂತ, ೧೪ ರಿಂದ ೧೬ ವರುಷ ತನಕ)
The stage of realisation and awakening.

**ಮೊದಲನೆಯ ಹಂತ:**—ಈ ಪ್ರಥಮ ಹಂತದಲ್ಲಿ ಗೀಚುತ್ತಿರುವುದೇ ಪ್ರಧಾನವಾಗಿದೆ. ಮಗುವಿನ ಕೈಗಳು ಅಪೂರ್ವ ಚೈತನ್ಯ ಯುಕ್ತವಾಗಿ ಹೆಚ್ಚಾಗಿ ಬಲದಿಂದ ಎಡಕ್ಕೇ ಇಡೀ ತೋಳಿನ ಚಲನೆಯಿಂದ ಗೀಚುತ್ತವೆ. ಮಗುವು ನಿರ್ಮಾಣ ಮತ್ತು ಕಲ್ಪನಾ ಶಕ್ತಿಗಳನ್ನೂ, ತನ್ನ ಭಾವನೆಯನ್ನು ಹೇಳಬೇಕೆಂಬ ಪ್ರೇರಣೆಯನ್ನೂ ಹೊಂದಿರುತ್ತದೆ. ಮಗುವು ಇಚ್ಛಾನುಸಾರ ಗೀಚುವುದಕ್ಕಾಗಿ ಅದಕ್ಕೆ ಬಳಪ ಪೆನ್ಸಿಲ್ಲು. ವಸ್ತುಗಳು ಸಿಗಬೇಕು. ಆ ಸಾಮಗ್ರಿಗಳಿಂದ ಮಗುವು, ಆಡಲಿ, ಬೆಳೆಯಲಿ. ಅವುಗಳನ್ನು ಹೀಗೆ ಹಿಡಿದುಕೊಳ್ಳು ಎಂದಾಗಲೀ, ಈ ಬಣ್ಣ ತೆಗೆದುಕೊಳ್ಳು ಎಂದಾಗಲೀ ವಿಧಿಸಬಾರದು, ಮಗುವು ಗೀಚಿದ್ದನ್ನು ನಾವು ತಿದ್ದಬಾರದು; ಉತ್ತೇಜನಕೊಡುತ್ತಿರಬೇಕು. ಆ ಗೀಚುವಿಕೆಗೆ ಶಿಕ್ಷಣದ ಮಹತ್ವವಿದೆ. ಅದು ನಿಸರ್ಗ ನಿಯಮದಂತೆ ಪೂರ್ತಿಯಾಗಿಯೇ ಎರಡನೆಯ ಹಂತವನ್ನು ತಲುಪಬೇಕು. ಈ ಬೆಳವಣಿಗೆಯ ಹಂತಗಳನ್ನು ಕೃತ್ರಿಮ ವಿಧಾನಗಳಿಂದ ಮೊಟಕುಗೊಳಿಸದೆ ಸಹಜವಾಗಿ ಸಾಗಲು ಬಿಟ್ಟರೆ ಸತ್ಫಲವು ದೊರಕುವುದು. ಉದಾಹರಣೆಗಾಗಿ—ಒಂದು ಮಿಡಿಯನ್ನು ಸ್ವಾಭಾವಿಕವಾಗಿ ಬೆಳೆಯಗೊಟ್ಟು ಅದು ಕಾಯಾಗಿ ಹಣ್ಣಾದರೆ ಹೆಚ್ಚು ಮಧುರವಲ್ಲವೆ ? " ಹಾಗೆ ಬೆಳೆಯಲು ಧೀರ್ಘಕಾಲ ಬೇಕಾಗುವುದು, ಇತರ ವಿಧಾನಗಳಿಂದ ಶೀಘ್ರವಾಗಿ ಹಣ್ಣುಮಾಡೋಣ, ಬೇಗ ತಿನ್ನಬಹುದು " ಎಂದರೆ ಫಲವು ಮಧುರ ವಾಗುವುದೇ ? ಈ ಪ್ರಥಮ ಹಂತದಲ್ಲಿ ಗೀಚುವುದೆಂದರೆ ಮಕ್ಕಳು ಮಾತನಾಡಲು ಕಲಿಯುವ ಮೊದಲು ತೊದಲ್ನುಡಿ ಆಡುತ್ತಿರುವ ಹಾಗೆ. ಅನಂತರ ಕ್ರಮೇಣ ತೋಳಿನ ಚಲನೆ ಬಿಟ್ಟು ಹಸ್ತ ಚಲನೆಯಿಂದ ರಚಿಸತೊಡಗುತ್ತವೆ.

ಒಮ್ಮೆ ಐದು ವರ್ಷದ ಒಂದು ಮಗುವು ಸ್ಲೇಟಿನ ಒಂದು ಚಿತ್ರ

ಮಾಡಲು ಹೇಳಿತು. ಹಿರಿಯರು ಆ ಪ್ರಕಾರ ಅದನ್ನು ಚಿತ್ರಿಸಲು ಮಗುವು ಅವರ ಕೈಯಿಂದ ಪೆನ್ಸಿಲ್ಲನ್ನು ಸೆಳೆದುಕೊಂಡು ಚಕ್ರಗಳ ಮೇಲೆ ಉರುಟುರುಟಾಗಿ ಕೆಲವು ಸುತ್ತು ಗೀಚು ಹಾಕಿತು. ಸೈಕಲ್ಲನ್ನೂ, ಮೋಟಾರನ್ನೂ ತಾನೇ ಚಿತ್ರಿಸಿದಾಗಲೂ ಚಿತ್ರದಲ್ಲಿ ಚಕ್ರಗಳಮೇಲೆ ಉರುಟರುಟಾಗಿ ಹೆಚ್ಚು ಸುತ್ತು ಗೀಚುವುದು ಅದರ ಆಕಾಂಕ್ಷೆ. ಚಕ್ರವು ಗಿರ್ರನೆ ತಿರುಗುತ್ತದೆ ಅನ್ನುವುದೇ ಅದರ ಉದ್ದೇಶ. ವಿಮಾನ ಹೀಗೆ ಹೋಗುತ್ತದೆ, ಹಕ್ಕಿ ಹೀಗೆ ಹಾರುತ್ತಪ್ಪೆ ಕುದುರೆ ಗಾಡಿ ಹೀಗೆ ಓಡುತ್ತದೆ ಎಂದು ಉದ್ದಗೆರೆಗಳನ್ನು ಎಳೆದು ಹೇಳುವುದುಂಟು.

ಆರಂಭದ ವರುಷಗಳದ್ದು ನಿಷ್ಕಳಂಕ ಮುಗ್ಧಮನಸ್ಸಿನ ಕೃತಿಗಳು. ಕ್ರಮೇಣ ಆ ಸರಳತೆ ಸಾದಾತನಗಳು ಲೋಪವಾಗುತ್ತವೆ. ಆರಂಭದಲ್ಲಿ ಮಕ್ಕಳಿಗೆ ಅನುಕ್ರಮವಾಗಿ ಕೆಂಪು, ಹಳದಿ, ನೀಲಿ ಮತ್ತು ಹಸರು ಇಷ್ಟದ ಬಣ್ಣಗಳಾಗುತ್ತವೆ. ಅನಂತರ ಕೆಂಪು ಹಳದಿಗಳ ಮೇಲಿದ್ದ ಮೋಹ ನಶಿಸಿ ನೀಲಿ ಮತ್ತು ಹಸುರು ಹೆಚ್ಚು ಒಲವಿನ ಬಣ್ಣಗಳಾಗುತ್ತವೆ. ವಯಸ್ಸಾದಂತೆ ಅವರು ಪ್ರಕಾಶಮಾನ ಬಣ್ಣಗಳನ್ನು ಬಳಸಲು ಇಷ್ಟಪಡುತ್ತಾರೆ. ಬಾಲಕರಿಗಿಂತಲೂ ಬಾಲಕಿಯರು ನೀಲಿ ಮತ್ತು ಹಸುರು ಬಣ್ಣಗಳನ್ನು ಬೇಗನೆ ಆರಿಸುತ್ತಾರೆ.

**ಎರಡನೆಯ ಹಂತ**—ಸಾಮಾನ್ಯವಾಗಿ ೫ ರಿಂದ ೮ ವರುಷ ತನಕ-ಸಂಕೇತಪ್ರಧಾನವಾಗಿರುತ್ತದೆ. ಆಗ ವಸ್ತುವನ್ನು ಕಣ್ಣಿಗೆ ಕಾಣುವ ರೀತಿಯಲ್ಲಿ ಚಿತ್ರಿಸುವುದಿಲ್ಲ. ವಸ್ತುವು ಇದಿರಿನಲ್ಲಿ ಇದ್ದರೂ ಅದನ್ನು ಚಿತ್ರಿಸುವ ಸಲುವಾಗಿ ನೋಡಲು ಇಚ್ಛಿಸುವುದಿಲ್ಲ. ಆ ವಸ್ತುವನ್ನು ಕುರಿತು ತಮ್ಮ ಮನಸ್ಸಿನಲ್ಲಿ ಅಚ್ಚೊತ್ತಿರುವುದನ್ನು ಚಿತ್ರಿಸುತ್ತಾರೆ. ಸಂಕೇತ ಪ್ರಧಾನವಾಗಿ ಚಿತ್ರಿಸುವ ಆ ವಿಧಾನಕ್ಕೆ ತನ್ನದೇ ಆದ ನಿಯಮಗಳಿವೆ. ಮುಖ್ಯವಾದುದೆಂದು

ಯೋಚಿಸಿದ ಭಾಗವನ್ನು ಗಾತ್ರದಲ್ಲಿ ದೊಡ್ಡದಾಗಿ ರಚಿಸಿ ಅದಕ್ಕೆ ಪ್ರಖರವಾದ ಬಣ್ಣ ಹಾಕುತ್ತಾರೆ. ಹಾಗೆ ಮಾಡುವುದನ್ನು ಸರಿಯಲ್ಲವೆಂದು ಆಕ್ಷೇಪಿಸಬಾರದು. ಮಗುವಿನ ಚಿತ್ರಗಳನ್ನು ತಿದ್ದುವುದೆಂದರೆ ಸುಳ್ಳುದಾಖಲೆಗಳನ್ನು ಸೃಷ್ಟಿಸಿದಂತೆ, ಫೋರ್ಜರಿ ಮಾಡಿದಂತೆ ಆಗುವುದು. ಮಗುವು ವಿಷಯಗಳನ್ನು ಆಸಕ್ತಿಯಿಂದ ಆರಿಸಿ ಚಿತ್ರ ರಚಿಸಿದರಾಯಿತು. ನಾವು ಅದನ್ನು ಮೆಚ್ಚಬೇಕು.

ಮನುಷ್ಯಾಕೃತಿ ರಚನೆಯು ಅವರಿಗೆ ಪ್ರೀತಿಯ ವಿಷಯವಾಗಿದೆ. ಅವರ ಎಲ್ಲ ಚಿತ್ರಗಳೂ ಭೂಮಿತಿಯ ಆಕೃತಿಗಳಾದ ವೃತ್ತ, ಆಯತ, ರೇಖೆಗಳು, ಗೋಲಾಕಾರ ಮೊದಲಾದವುಗಳಿಂದಲೇ ನಿರ್ಮಾಣವಾಗುತ್ತವೆ. ಮೈ, ಕೈ, ಕಾಲು ಮೊದಲಾದ ದೊಡ್ಡ ಭಾಗಗಳನ್ನು ಮೊದಲು ಗಮನಿಸಿದವರಾಗಿ ಗುರುತುಗಳಿಂದ ಚಿತ್ರಿಸುತ್ತಾರೆ. ದಿನಕಳೆದಂತೆ ಇತರ ಅಂಶಗಳನ್ನೂ ಗಮನಿಸಿ ಅವುಗಳನ್ನೂ ತೋರಿಸತೊಡಗುತ್ತಾರೆ. ಅಂಗಾಂಗಗಳನ್ನು ಪರಸ್ಪರ ಸಂಬಂಧವುಳ್ಳ ಸಮಗ್ರವನ್ನಾಗಿ ಅಳವಡಿಸುವುಕ್ಕಾಗಲಿ, ವಿವರಗಳನ್ನು ತೋರಿಸುವುದಕ್ಕಾಗಲಿ ಲಕ್ಷಿಸುವುದಿಲ್ಲ. ಅದು ಮನುಷ್ಯಾಕೃತಿ ಎಂದು ಬೋಧೆಯಾಗುತ್ತದೆ. ಚಿತ್ರಗಳನೆಲ್ಲಾ ಚುರುಕಾಗಿ ಮಾಡಿ ಮುಗಿಸುತ್ತಾರೆ.

ಎಂಟನೇ ವರುಷ ಹಿಡಿದವರಿಗೂ ವಸ್ತುಗಳನ್ನು ನೋಡಿ ರಚಿಸುವ ಭಾವನೆ ಇಲ್ಲ. ಮನೆಯ ಚಿತ್ರ ಮಾಡಿದರೆ ಅದರಲ್ಲಿ ಅಡುಗೆ ಮನೆಯೊಳಗೆ ಅಮ್ಮನು ತಿಂಡಿ ಮಾಡುತ್ತಿರುವುದನ್ನೂ, ಕೋಣೆಯೊಳಗೆ ಇರುವ ತಮ್ಮ ಆಟದ ಗೊಂಬೆ, ತಂಗೆಯ ತೊಟ್ಟಿಲು, ಅಣ್ಣನ ಸೈಕಲ್ಲು ಮೊದಲಾದ ಇಷ್ಟದ ವಸ್ತುಗಳನ್ನೂ ಚಿತ್ರಿಸುತ್ತಾರೆ. ಮನೆಯ ಹೊರಗಿನಿಂದ ನೋಡುವಾಗ ಒಳಗಿರುವ ಆ ಎಲ್ಲಾ ವಸ್ತುಗಳೂ ಮತ್ತು ಅಮ್ಮನು ಕಾಣುತ್ತಾರೆಯೇ ?

ಮಕ್ಕಳಿಗೆ ಆ ವಿಚಾರವು ಬೇಕಾದುದಲ್ಲ. ಅಲ್ಲಿ ಅವರು ಇದ್ದಾರೆ ಎಂಬುದು ಮಕ್ಕಳಿಗೆ ತಿಳಿದಿದೆ. ಅಲ್ಲದೆ ವಸ್ತುಗಳ ಮುಖ್ಯ ರೂಪಗಳನ್ನು ಸೂಚಿಸುವ ಗುರುತುಗಳಿಂದಲೇ ಅವರು ತಮ್ಮ ಭಾವನಾ ನಿರೂಪಣೆಮಾಡುತ್ತಾರೆ.

ನಾಲ್ಕನೆಯ ಹಂತಕ್ಕೆ ತೋರ್ಕೆಯ ನೈಜಹಂತ ಎಂದು ಹೆಸರು. ಕಲ್ಪನೆ ಮತ್ತು ಜ್ಞಾಪಕಗಳಿಂದ ಚಿತ್ರಿಸುವ ಸ್ಥಿತಿಯಿಂದ ಪ್ರಕೃತಿಯನ್ನು ನೋಡಿ ಚಿತ್ರಿಸುವ ದಿಶೆಗೆ ಒಲಿಯುತ್ತಿದ್ದಾರೆ. ಗಮನಿಸಿದ ಒಂದೊಂದೇ ವಿಚಾರವನ್ನು ಸೇರಿಸುತ್ತಾರೆ. ಹಸ್ತ, ಪಾದ, ಆಕೃತಿಗಳ ಹೋಲಿಕೆ ಇಲ್ಲದಿದ್ದರೂ ಬಸ್ಸು ಡ್ರೈವರನ ಕೈಯು ಚಾಲಕ ಚಕ್ರವನ್ನು ಮುಟ್ಟಿರುವುದನ್ನೂ, ಕಾಫಿ, ತಿಂಡಿ ಕೊಡುವಾಗ ಲೋಟ ತಟ್ಟೆಗಳು ತಾಯಿಯ ಕೈಗೆ ತಾಗಿ ಇರುವುದನ್ನೂ ಈಗ ಅವರ ಚಿತ್ರಗಳಲ್ಲಿ ಕಾಣಬಹುದು.

ಸಾಮಾನ್ಯವಾಗಿ ಹನ್ನೊಂದನೆಯ ವರುಷಕ್ಕೆ ಕಾಲಿಟ್ಟರೆಂದರೆ ಬದಿಮುಖದ ಚಿತ್ರಗಳನ್ನು ಅವರು ರಚಿಸತೊಡಗುತ್ತಾರೆ. ಅದರಲ್ಲೂ ಕಣ್ಣು ಮಾತ್ರ ಬದಿ ಮುಖದಲ್ಲಿ ತೋರುವಂತೆ ಇರುವುದಿಲ್ಲ. ಇದಿರು ಮುಖದಲ್ಲಿ ಕಾಣುವಂತೆ ಉದ್ದವಾದ ಪೂರ್ತಿ ಕಣ್ಣನ್ನು ಚಿತ್ರಿಸುತ್ತಾರೆ. ಬೆಳಕು ನೆರಳುಗಳಿಲ್ಲ. ಅದನ್ನು ನೋಡುವಾಗ ಪುರಾತನ ಶೈಲಿಯ ಚಿತ್ರಗಳು ನೆನಪಿಗೆ ಬರುತ್ತವೆ. ಕಲಾಪ್ರಪಂಚದಲ್ಲಿ ಸಾಮಾನ್ಯ ಹದಿನಾರನೇ ಶತಮಾನದ ನಂತರ ಯಥಾವತ್ತಾದ ಪ್ರಕೃತಿ ದೃಶ್ಯಗಳು, ನಿಜವಿವರ ನಿರೂಪಣೆಗಳು ಹೆಚ್ಚಾಗತೊಡಗಿದವು. ಸಾಧ್ಯವಾದ ಮಟ್ಟಿಗೆ ಈ ತದ್ರೂಪ ಚಿತ್ರಗಳ ಕಡೆಗೆ ಮಕ್ಕಳ ಮನಸ್ಸು ಸೆಳೆಯಬಾರದು. ಅವರು ತಮ್ಮ ಸಹಜ ರೀತಿಯಲ್ಲೇ ಚಿತ್ರಿಸುತ್ತಾ ಹೋಗಲು ಅವಕಾಶ ಒದಗಿಸಬೇಕು. ಅಧ್ಯಾಪಕನು ಸ್ವತಃ ಕಲಾವಿದನಾದರೆ ತನ್ನದೇ ಆದ ಚಿತ್ರ

ಶೈಲಿಯಲ್ಲಿ ಮಕ್ಕಳಮೇಲೆ ಹೇರುವ ಪ್ರಮಾದ ಮಾಡಬಹುದು. ಹಾಗೆ ಆಗಬಾರದು.

ಕ್ರಮೇಣ ಶೈಶವ ಮುಗಿದು ಪ್ರೌಢಾವಸ್ಥೆಯು ಆರಂಭವಾಗುತ್ತದೆ. ಕಲ್ಪನಾಶಕ್ತಿ ರಚನಾಸಾಮರ್ಥ್ಯಗಳು ಕಡಮೆಯಾಗತೊಡಗುತ್ತವೆ. ಅನುಕರಣೆಯನ್ನು ಆರಂಭಿಸುತ್ತಾರೆ. ಈ ಕಾಲದಲ್ಲಿ ಮಕ್ಕಳಿಗೆ "ನನ್ನ ಚಿತ್ರ ತದ್ರೂಪವಾಗಿಲ್ಲ, ಏನೋ ತಪ್ಪಾಗಿದೆ" ಎಂಬ ಭಾವನೆ ಉಂಟಾಗುತ್ತದೆ. ಚಿತ್ರಗಳಲ್ಲಿ 'ರೂಪಸಾದೃಶ್ಯ ಬೇಕು' ಎಂಬ ಬಯಕೆ ಉಂಟಾಗುತ್ತದೆ. ಆಗ "ನೈಜಹಂತ" ಆರಂಭವಾಯಿತೆನ್ನಬಹುದು. ಈ ಹಿಂದೆ ಶಿಶುತನದಲ್ಲಿ ಆತ್ಮಸಂತೋಷಕ್ಕಾಗಿ ಚಿತ್ರ ರಚಿಸುತ್ತಿದ್ದರು. ಈಗ ಬಾಹ್ಯಪ್ರಪಂಚಕ್ಕೆ ಬೇಕಾದಂತೆ ಚಿತ್ರಿಸುವ ಬುದ್ಧಿ ಮೂಡುತ್ತದೆ. ವಸ್ತುಗಳ ತದ್ರೂಪಗಳನ್ನು ಚಿತ್ರಿಸುವುದಕ್ಕೋಸ್ಕರ ಕ್ರಮ ವಿಧಾನಗಳನ್ನು ಕಲಿಯಲು ಅಪೇಕ್ಷಿಸುತ್ತಾರೆ. ವಸ್ತುಗಳನ್ನು ಲಕ್ಷ್ಯಪೂರ್ವಕ ನೋಡುವ ಗುಣವನ್ನೂ, ಉಪಕರಣಗಳನ್ನು ಉಪಯೋಗಿಸುವ ವಿಧಾನಗಳನ್ನು, ಚಿತ್ರರಚನಾಕ್ರಮಗಳನ್ನೂ ಸ್ವಲ್ಪ ಸ್ವಲ್ಪವಾಗಿ ಬೋಧಿಸತೊಡಗಲು ಇದು ತಕ್ಕುದಾದ ಕಾಲ. ಕುಳಿತಲ್ಲಿಂದಲೇ ಅಳತೆ ತೆಗೆಯುವ ಕ್ರಮ, ಪರ್ಸ್ಪೆಕ್ಟಿವ್, ಛಾಯಾಪ್ರಕಾಶ ಮೊದಲಾದ ಕಲಾತಂತ್ರಜ್ಞಾನವನ್ನು ಈಗ ಹಿತಮಿತವಾಗಿ ನೀಡತೊಡಗಬೇಕು. ಮುಂದೆ ವ್ಯಕ್ತಿ ಚಿತ್ರ, ವರ್ಣಚಿತ್ರ, ವ್ಯಾಪಾರಿಚಿತ್ರ, [Commercial art] ಕಲಾವಿದರಾಗುವವರು ಕಲಾತಂತ್ರಜ್ಞಾನವನ್ನು ಅಗತ್ಯವಾಗಿ ಪಡೆಯುವರು. ಅವನ್ನು ಈಗಲೇ ಚಿಕ್ಕಮಕ್ಕಳಮೇಲೆ ಹೇರುತ್ತಾ ಅವರ ಆಲೋಚನಾಶಕ್ತಿಗೆ ಭಂಗ ತರಬಾರದು.

ಸಾಮಾನ್ಯವಾಗಿ ಹದಿಮೂರನೆ ವರುಷ ಪ್ರಾಯವು ಸಮೀಪಿಸು

ವಾಗ ಆ ತನ್ನ ಚಿತ್ರನನ್ನು ವೇಗನಾಗಿ ರಚಿಸುತ್ತಿದ್ದ ರಭಸವು ಮಂನವಾಗುತ್ತನೆ. ಆ ಮೊದಲು ಚಿತ್ರರಚನೆಯೆಂಬುದು ಮಗುವಿಗೊಂದು ಆಟವಾಗಿತ್ತು. ಈಗ ನಿಧಾನವಾಗಿ ಮತ್ತು ಶ್ರಮ ಪೂರ್ವಕ ರಚಿಸತೊಡಗುತ್ತಾನೆ. ಹಿಂದಿನಂತೆ ಭಾವನೆಗಳನ್ನು ಚಿತ್ರಿಸಲಾರನು. ಆ ಬಗ್ಗೆ ಧೈರ್ಯಗುಂದಿರುತ್ತದೆ. ಮನುಷ್ಯ ಚಿತ್ರರಚನೆ ಕಡಮೆಯಾಗುತ್ತದೆ. ಆಲಂಕಾರಿಕ ನಮೂನೆಗಳನ್ನು ಚಿತ್ರಿಸಲು ಇಚ್ಛೆ, ಧೈರ್ಯ ಅಧಿಕವಾಗುತ್ತದೆ.

ಚಿತ್ರ ಭಾಷೆಯಲ್ಲಿ ಹೇಳುವ ಶೀಲವು ಕಳೆದಿರುತ್ತದೆ. ತೀರಾ ಎಳೆಯವರಿರುವಾಗ ಗೀಚುಗಳನ್ನು ಹಾಕಿ ಅನಂತರ ಹೆಸರಿಡುತ್ತಿದ್ದವರು, ಈಗ ತಾವು ಏನನ್ನು ರಚಿಸುತ್ತೇವೆ ಎಂಬುದನ್ನು ನಿಶ್ಚಯಿಸಿ ಅನಂತರ ಆ ವಿಷಯವನ್ನು ಚಿತ್ರಿಸುತ್ತಾರೆ.

ನೈಜರೂಪ [Realistic] ಚಿತ್ರರಚನೆಯ ಅಭ್ಯಾಸವು ನಮ್ಮಲ್ಲಿ ಹಲವರಿಗೆ ಲಭ್ಯವಾಗುವುದಿಲ್ಲ. ಏಕೆಂದರೆ ಅಷ್ಟರಲ್ಲಿ ಸಾಮಾಜಿಕ, ಶೈಕ್ಷಣಿಕ ಪರಿಸ್ಥಿತಿಗಳ ದೆಸೆಯಿಂದ ಮಕ್ಕಳು ಚಿತ್ರ ರಚನೆಯಲ್ಲಿ ಹೊತ್ತುಕಳೆಯುವುದನ್ನು ಹಿರಿಯರು ಮೆಚ್ಚುವುದಿಲ್ಲ. ಸರ್ವತ್ರ ಪರೀಕ್ಷಾ ಪಾಠಗಳಿಗೆ ಗಮನ ಕೊಡಲಿ, ಪಾಸಾಗಲಿ ಎಂದು ಗುರುಹಿರಿಯರೆಲ್ಲರ ಹಾರೈಕೆಯಾಗಿದೆ. ಅಲ್ಲದೆ ಮೇಲಿನ ತರಗತಿಗಳಲ್ಲಿ ಮತ್ತು ಕಾಲೇಜುಗಳಲ್ಲಿ ನಮ್ಮಲ್ಲಿ ಚಿತ್ರಪಾಠವು ಇಲ್ಲವಾಗಿದೆ.

ಈಗ ಸರ್ವತ್ರ ಹರಡಿರುವ ಜಾಹಿರಾತು ಚಿತ್ರ, ಛಾಯಾಚಿತ್ರಗಳ ಪ್ರಭಾವದ ದೆಸೆಯಿಂದ ಶಿಶುತನದ ಪ್ರಥಮ ಗೀಚುವಿಕೆಯ ನಂತರ ಮಗುವಿನ ಚಿತ್ರದ ಗತಿಯು ನೈಜ ರೂಪರಚನೆಯ ಕಡೆಗೆ ಬೇಗನೆ ಒಲಿಯುತ್ತದೆ; ಪ್ರತಿ [Copy] ತೆಗೆಯುವ ಶೀಲವು ಬೆಳೆಯುತ್ತದೆ. ಚಿತ್ರ ರಚಿಸುವಾಗ ಸರಿಯಾಯಿತೇ ? ಇಲ್ಲವೇ?

ಎಂಬ ಶಂಕೆ, ತರ್ಕಬುದ್ಧಿ ಉಂಟಾಗುತ್ತವೆ. ಒಬ್ಬ ಚಿಕ್ಕ ಬಾಲಕನು ಕೂಲಿ ಕೆಲಸಗಾರಳ ಚಿತ್ರಮಾಡಿ ಅವಳಿಗೆ ಚಿತ್ರವಲ್ಲಿ ಪ್ರಕಾಶಮಾನ ಬಣ್ಣಗಳನ್ನು ಉಪಯೋಗಿಸಿದನು. ಅವನಿಗೆ ಆ ಚಿತ್ರದಲ್ಲಿ ಆಕೆಯು ಮುಖ್ಯ ವಿಷಯ ಆಗಿದ್ದಳು. ಸಮೀಪವಿದ್ದ ಒಬ್ಬ ಬಾಲಕಿಯು ಆ ಚಿತ್ರದಲ್ಲಿ ಹಾಗೆ ಬಣ್ಣ ಹಾಕಿದ್ದು ಸರಿಯಲ್ಲ ಎಂಬುದಾಗಿ ಅವನಿಗೆ ಬುದ್ಧಿ ಹೇಳಿದಳು. "ಏನಿದು ? ಮುಸುರೆ ತಿಕ್ಕುವವಳಿಗೆ ತನ್ನ ಮಕ್ಕಳನ್ನು ಸಾಕುವುದು ಮತ್ತು ಹೊಟ್ಟೆ ತುಂಬಿಕೊಳ್ಳುವುದೇ ಕಷ್ಟವಾಗಿದೆ, ಅವಳಿಗೆ ಅಂತಹ ಚಲೋ ಬಟ್ಟೆಗಳು ಎಲ್ಲಿಂದ ಬರುತ್ತವೆ ? ಅಲ್ಲಿ ಹಾಗೆ ವೈಭವದ ಬಣ್ಣಗಳನ್ನು ಬಳಸುವುದು ತಪ್ಪು," ಎಂದು ಆಕ್ಷೇಪಿಸಿದಳು.

**ಬಾಲಕ ಬಾಲಕಿಯರ ಚಿತ್ರಗಳು**—ಸಾಮಾನ್ಯವಾಗಿ ಏಳು ವರುಷಗಳ ತನಕ ಬಾಲಕ ಬಾಲಕಿಯರಿಬ್ಬರಲ್ಲೂ ಭಾವ ಪ್ರಕಟಣೆಗಾಗಿ ಗೀಚುವಿಕೆ, ಚಿತ್ರಸಂಕೇತಗಳು ಸಮವಾಗಿರುತ್ತವೆ. ಅವರು ಆತ್ಮಾಭಿವ್ಯಕ್ತಿಗೆ ಸ್ವಚ್ಛಂದ ಅವಕಾಶ ನೀಡಿದರೆ ಸಾಮಾನ್ಯ ಎಂಟನೇ ವರುಷದ ನಂತರ ಅವರ ಚಿತ್ರಕೃತಿಗಳಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ಚುಟುಕಾಗಿ ಹೇಳುವುದಾದರೆ ಬಾಲಕರ ಚಿತ್ರಗಳಲ್ಲಿ ಪೌರುಷ, ಸ್ಪರ್ಧೆ, ವೇಗ, ದುಡುಕುತನ ಮೊದಲಾದ ಗುಣಗಳೂ, ಬಾಲಕಿಯರ ಚಿತ್ರಗಳಲ್ಲಿ ಅಲಂಕಾರ, ಅಚ್ಚುಕಟ್ಟುತನ, ವಿವರಗಳ ಕಡೆ ದೃಷ್ಟಿ, ಸೌಮ್ಯಸ್ವಭಾವ ಮೊದಲಾದ ಗುಣಗಳೂ ಕಂಡುಬರುತ್ತವೆ. ಶಾಂತವಾದ ವಿಷಯ, ಕೋಮಲವಾದ ವಸ್ತುಗಳು, ಪತಂಗ, ಉದ್ಯಾನ ಮೊದಲಾದವುಗಳು ಬಾಲಕಿಯರಿಗೆ ಚಿತ್ರವಿಷಯಗಳಾದರೆ, ಉಗಿಬಂಡಿ, ಲಾರಿ, ಸೇತುವೆ, ಕ್ರಿಕೆಟು ಆಟ, ಸರ್ಕಸ್ಸು, ಕುದುರೆ ರೇಸ್ ಮುಂತಾದುವುಗಳನ್ನು ಚಿತ್ರಿಸುವುದರಲ್ಲಿ ಬಾಲಕರು ಆನಂದಪಡುತ್ತಾರೆ. ಬಾಲಕಿಯರು ತರಗತಿ

ಗಳಿಗೆ ಮೆಲ್ಲನೆ ಬಂದು ಇಡೀ ಪಾಠಾವಧಿಯಲ್ಲಿ ಸಹನೆಯಿಂದ ಚಿತ್ರರಚಿಸುತ್ತಾರೆ. ತಮ್ಮ ಚಿತ್ರಕೃತಿಗಳನ್ನು ತಾವಾಗಿ ತಂದು ತೋರಲು ನಾಚುತ್ತಾರೆ. ಬಾಲಕರು ಕಲಾಂತರಗತಿಗಳಿಗೆ ಓಡಿ ಬಂದು ಚಿತ್ರಗಳನ್ನು ಬೇಗನೆ ರಚಿಸಿ ಬಿಡುತ್ತಾರೆ, ತಮ್ಮ ಚಿತ್ರ ಗಳನ್ನು ತಂದುತೋರಿಸಿ ಅದು ಏನು ಎಂಬುದನ್ನು ತಾವಾಗಿ ವಿವ ರಿಸಿ ಹೇಳುತ್ತಾರೆ. ನಮ್ಮಿಂದ ಮೆಚ್ಚುಗೆಯ ನಗು ಮತ್ತು ಎರಡು ಪ್ರಶಂಸಾ ಮಾತುಗಳಿಗಾಗಿ ಕಾಯುತ್ತಾರೆ.

ಜಗತ್ತಿನ ಎಲ್ಲಾ ರಾಷ್ಟ್ರಗಳ ಮಕ್ಕಳ ಚಿತ್ರಗಳಲ್ಲೂ ವಯೋ ಮಾನಕ್ಕನುಗುಣವಾಗಿ ಈ ಮಾನಸಿಕ ಬೆಳವಣಿಗೆಯ ಹಂತಗಳಲ್ಲಿ ಸಮಾನತೆಯು ಕಂಡುಬರುತ್ತವೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಹಂತಗಳು ಇಷ್ಟೇ ಅಲ್ಲ, ಇನ್ನೂ ಅನೇಕ ಇವೆ. ಮಗುವಿನ ಮನಸ್ಸು ಇವೆಲ್ಲವನ್ನೂ ದಾಟಿ ಬೆಳೆಯುವುದು. ಈ ಹಂತಗಳು ಸಹಜ ಮತ್ತು ನಿರ್ದಿಷ್ಟವಾದುವುಗಳು. ಮಗುವಿನ ಮನೋ ಧರ್ಮವು ವಯಸ್ಕರದ್ದಕ್ಕಿಂತ ಭಿನ್ನವಾದುದು. ಅದರಮೇಲೆ ವಯ ಸ್ಕರ ಆದರ್ಶವನ್ನು ಕಾಲಕ್ಕಿಂತ ಮೊದಲೇ ಹೇರಿದರೆ ಮಗುವಿನಲ್ಲಿ ರುವ ಸೃಜನಾತ್ಮಕ ರಚನಾಗುಣವು ನಾಶವಾಗುವುದು. ಮೊಗ್ಗು ಅರಳಿ ಬೇಗನೆ ಹೂವಾಗಲಿ ಎಂದು ಮೊಗ್ಗಿನ ಎಸಳುಗಳನ್ನು ಕೈ ಯಿಂದ ಬಿಡಿಸುವುದಿಲ್ಲ; ನೈಸರ್ಗಿಕವಾಗಿ ಬೆಳೆದು ಅರಳಲು ಬಿಡು ತ್ತೇವೆ. ಈ ಮಕ್ಕಳನ್ನು ಕುರಿತು ಕೂಡ ನಾವು ಹಾಗೆಯೇ ತಿಳಿದು ವರ್ತಿಸಬೇಕು.

ಎಲ್ಲಾ ಮಕ್ಕಳ ಮಾನಸಿಕ ಬೆಳವಣಿಗೆಯ ಹಂತಗಳು ಮೇಲೆ ಹೇಳಿದ ವಯೋಮಾನಕ್ಕನುಗುಣವಾಗಿಯೇ ಇರುತ್ತವೆ ಎನ್ನ ಲಾಗದು. ಕೆಲವು ಮಕ್ಕಳು ಮೇಲೆ ನಮೂದಿಸಿದ ವಯಸ್ಸಿಗಿಂತ ಮುಂಚೆಯೇ ತಾವಾಗಿ ಆ ಹಂತವನ್ನು ದಾಟಿರಬಹುದು. ಕೆಲವರು

ಆ ವಯಸ್ಸಿನ ನಂತರವೂ ಮಾನಸಿಕ ಬೆಳವಣಿಗೆಯಲ್ಲಿ ಹಿಂದಿನ ಹಂತದಲ್ಲಿಯೇ ಉಳಿದಿರಬಹುದು. ಆದಕಾರಣ ವಯಸ್ಸನ್ನು ಮಾತ್ರ ನೋಡದೆ ಅವರ ಮಾನಸಿಕ ಬೆಳವಣಿಗೆಯನ್ನೇ ಪರಿಶೀಲಿಸಿ ಅಧ್ಯಾಪಕನು ಶಿಕ್ಷಣಕ್ರಮವನ್ನು ನಿರ್ಧರಿಸಬೇಕು. ಸಾಮಾನ್ಯ ವಾಗಿ ಹೇಳುವುದಾದರೆ ಐದನೆಯ ದರ್ಜೆಯ ತನಕ ಶಿಶುಚಿತ್ರಕಲಾ ಪಾಠವು ನಡೆಯಬೇಕು. ಅನಂತರ ಪಾತ್ರವರಿತು ಚಿತ್ರರಚನಾ ತಂತ್ರಜ್ಞಾನ ಬೋಧನೆಯು ಹಿತಮಿತವಾಗಿ ಆರಂಭವಾಗಬಹುದು. ಆ ಬಗ್ಗೆ ಕಟ್ಟುನಿಟ್ಟಾದ ನಿಯಮ ಹೇಳಲು ಸಾಧ್ಯವಾಗದು. ಅದ ನ್ನೆಲ್ಲ ಆಯಾ ಸಮಯ ಸಂದರ್ಭ ಅನುಭವಗಳೇ ನಿರ್ಧರಿಸಬೇಕು.

## ಶಿಶುಚಿತ್ರಕಲೆಯ ಇತಿಹಾಸ

ಶಿಶುಚಿತ್ರಕಲೆಗೂ ಒಂದು ಇತಿಹಾಸವೇ ?

ಪಾಶ್ಚಾತ್ಯ ಪೌರ್ವಾತ್ಯ ಚಿತ್ರಕಲೆಗಳು ಮತ್ತು ಅಜಂತ, ರಾಜಪೂತ, ಮೊಗಲ ಮೊದಲಾದ ಕಲೆಗಳ ಹೆಸರುಗಳನ್ನು ಹಿಂದಿ ನಿಂದಲೂ ಕೇಳುತ್ತಿದ್ದೇವೆ. ಅವುಗಳೆಲ್ಲಾ ಅಲ್ಲಲ್ಲಿ ನೋಡಲು ಸಿಗುತ್ತವೆ. ಈಗ ನವ್ಯ ಚಿತ್ರಕಲಾಕೃತಿಗಳು ವಿಶೇಷವಾಗಿ ಗೋಚರಿಸುತ್ತವೆ. ಈ ಎಲ್ಲಾ ಚಿತ್ರಕಲೆಗಳಿಗೆ ಶತಮಾನಗಳ ಇತಿ ಹಾಸವಿದೆ. ಹತ್ತು ಹದಿನೈದು ಸಾವಿರ ವರುಷಗಳ ಹಿಂದಿನ ಆದಿ ಕಾಲದ ಮನುಷ್ಯನ ಕೃತಿಗಳು ಕೂಡ ಉಳಿದಿವೆ; ರಕ್ಷಿಸಲ್ಪಟ್ಟಿವೆ. ಆದರೆ ಒಂದು ಶತಮಾನಕ್ಕಿಂತ ಹಿಂದಿನ ಮಕ್ಕಳ ಕಲಾಕೃತಿಗಳನ್ನು ಉಳಿಸಿರುವುದು ಕಂಡುಬರುವುದಿಲ್ಲ. ಎಲ್ಲೋ ಅಲ್ಲೊಂದು ಇಲ್ಲೊಂದು ಉಂಟೆಂದು ಹೇಳಬಹುದು. ಅವು ಕೂಡ ವಿಶ್ವಾಸಕ್ಕೆ ಪಾತ್ರವಾದವುಗಳೇ ? ಇತರರಿಂದ ತಿದ್ದಲ್ಪಟ್ಟಿರಬೇಕು. ಈ ಹಿಂದಿನ ಪರಿಶುದ್ಧವಾದ ಶಿಶುಕಲಾಕೃತಿಗಳು ದುರ್ಲಭವಾಗಿವೆ; ಮಕ್ಕಳು ಚಿತ್ರಿಸಬಲ್ಲರೇ ? ಮಕ್ಕಳದ್ದು ಚಿತ್ರಕಲೆಯೇ ? ಎಂಬ ತಾತ್ಸಾರ

ಭಾವನೆಯು ಹಿಂದಿನಿಂದಲೂ ಜನರಲ್ಲಿ ಬೇರೂರಿತ್ತು. ಆದಕಾರಣ ಶಿಶುಚಿತ್ರಕಲಾಸಂಗ್ರಹವು ಇಲ್ಲವಾಗಿದೆ; ಶಿಶುಚಿತ್ರ ಕಲೆಯ ಇತಿಹಾಸವೂ ಚಿಕ್ಕದಾಗಿದೆ.

ಪ್ರತಿಯೊಂದು ಮಗುವೂ ಹುಟ್ಟುಕಲಾವಿದನೆಂಬುದಾಗಿ ಈ ಶತಮಾನದ ಆರಂಭದ ತನಕ ಯಾರಿಗೂ ಭಾವನೆ ಬಂದಿರಲಿಲ್ಲ. ಇದರ ಅರ್ಥ ' ಎಲ್ಲಾ ಮಕ್ಕಳು ಚಿತ್ರಕಲಾವಿದರಾಗಬಲ್ಲರು ' ಎಂಬುದಾಗಿ ಅಲ್ಲ. ' ಮಗುವಿಗೆ ಕೂಡ ಒಂದು ವ್ಯಕ್ತಿತ್ವ ಇದೆ. ಅದಕ್ಕೇ ಅದರದ್ದೇ ಆದ ನಿಯಮಗಳಿವೆ, ' ಎಂದು ತಿಳಿಯುವುದರೊಂದಿಗೆ ಶಿಶುಚಿತ್ರಕಲೆಯ ಇತಿಹಾಸದ ಆವಿರ್ಭಾವವಾಯಿತು. ಇದು ಮಕ್ಕಳ ಮಾನಸಿಕ ಬೆಳವಣಿಗೆಯ ದೃಷ್ಟಿಯಿಂದ ವಿಚಾರಾರ್ಹ ವಿಷಯವಾಗಿದೆ. ಬಾಲಕರು ಚಿತ್ರಿಸುತ್ತಿದ್ದರೆ ಎಷ್ಟೋ ಮಂದಿ ಪಾಲಕರು, ' ಗೀಚುತ್ತಾ ಸಮಯ ಹಾಳುಮಾಡಬೇಡಿರೋ ಪಾಠ ಓದಿರಿ, ' ಎಂದು ಗದರಿಸುತ್ತಾರೆ. ತಮ್ಮ ಚಿರಂಜೀವಿಯು ಚಿತ್ರಶಿಲ್ಪಿಯಾಗುವುದು ಬೇಡ, ವಿಶ್ವವಿದ್ಯಾನಿಲಯದ ಪದವೀಧರನಾಗಬೇಕು; ಅನಂತರ ಸರಕಾರೀ ಅಧಿಕಾರಿಯಾಗಬೇಕು. ಅದಕ್ಕಾಗಿ ಚಿತ್ರಬಿಡಿಸುವುದು ಅಗತ್ಯವಿಲ್ಲ, ಎಂದು ಹಿರಿಯರ ಹೃದಯ. ಈ ನಡತೆಯಿಂದ ಅನೇಕಮಂದಿ ಮೇಧಾವಿಗಳ ಪ್ರತಿಭೆಯು ಕುಂಠಿತವಾಗುತ್ತದೆ ಎಂದು ಈಗ ವಿದ್ಯಾತಜ್ಞರ ಭಾವನೆ. ಅನೇಕ ಮಂದಿ ಶ್ರೇಷ್ಠ ಕಲಾವಿದರು ಕೂಡ ಬಾಲಕರಾಗಿದ್ದಾಗ ಚಿತ್ರ ಮಾಡುತ್ತಿದ್ದುದಕ್ಕಾಗಿ ಹಿರಿಯರ ಹಿಂಸೆ ಅನುಭವಿಸಿದ್ದಾರೆ.

ಶಾಲೆಗಳಲ್ಲಿ ಕಲಾಶಿಕ್ಷಣದ ಉದ್ದೇಶವು ಮಕ್ಕಳನ್ನು ಚಿತ್ರಕಲಾವಿದರನ್ನಾಗಿ ತರಬೇತು ಮಾಡುವುದಲ್ಲ. ಅದರ ಯೋಚನಾಶಕ್ತಿ, ಸೃಜನಾತ್ಮಕ ಗುಣಗಳನ್ನು ಅಭಿವೃದ್ಧಿಗೊಳಿಸಿ ಭವಿಷ್ಯ ಜೀವನದಲ್ಲಿ ಅವರು ಯಾವ ವೃತ್ತಿಯನ್ನೇ ಹಿಡಿಯಲಿ, ಯಾವ ಪರಿಸ್ಥಿತಿ

ಗಳೇ ಒದಗಿ ಬರಲಿ, ಅಂತಹ ಸಂದರ್ಭಗಳಲ್ಲಿ ಉತ್ತಮರೀತಿಯಲ್ಲಿ ವ್ಯವಹರಿಸುವ ಮತ್ತು ಸಮಸ್ಯೆಗಳನ್ನು ಬಗೆಹರಿಸುವ ಯೋಗ್ಯತೆ ಉಂಟಾಗುವಂತೆ ಆದರಲ್ಲಿ ರಚನಾ ಸಾಮರ್ಥ್ಯವನ್ನು ಬೆಳೆಸುವುದಾಗಿದೆ.

**ಇಂಗ್ಲೆಂಡಿನಲ್ಲಿ**–ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಇಂಗ್ಲೆಂಡ್ ದೇಶವು ಈ ಶಿಶುಚಿತ್ರಕಲಾಪದ್ಧತಿಯನ್ನು ಸ್ವಾಗತಿಸಿತು. ಅಲ್ಲಿಯ ಶಾಲೆಗಳಲ್ಲಿ ಈ ಕಲಾಶಿಕ್ಷಣವನ್ನು ನೀಡಲು ತೊಡಗಿದವರಲ್ಲಿ ಮೇರಿಯಾ ರಿಚರ್ಡ್‌ಸನ್ ಎಂಬುವಳು ಮೊದಲಿಗಳು. ಚಿತ್ರಿಸುವ ಸಲುವಾಗಿ ಒಂದು ವಿಷಯ, ಪಾಠಸಮಾರಂಭ, ಕಥೆ ಅಥವಾ ವಾರ್ತೆಗಳನ್ನೆತ್ತಿ ಸಂಭಾಷಣೆಮಾಡುತ್ತಿದ್ದಳು. ಅದರಿಂದ ಮನಸ್ಸಿನಲ್ಲುಂಟಾದ ಮಾನಸಿಕ ಚಿತ್ರಗಳನ್ನು ಅವರದ್ದೇ ಆದ ವಿಶಿಷ್ಟರೀತಿಯಲ್ಲಿ ಚಿತ್ರಿಸಲು ಉತ್ತೇಜನ ಕೊಡುತ್ತಿದ್ದಳು. ಅವರ ಚಿತ್ರಗಳಲ್ಲಿ ನೈಜ ಆಕಾರಗಳಿಲ್ಲದಿದ್ದರೂ ಸರಳತೆ, ಮುಗ್ಧತೆಗಳು ಕಂಡುಬರುತ್ತಿದ್ದವು. ಸಾರ್ವಜನಿಕರು ಈ ಗುಣವಿಶೇಷಗಳನ್ನು ಗಮನಿಸಲೆಂದು ಈ ಕೃತಿಗಳನ್ನೂ ಇವಕ್ಕಿಂತ ಮುಂಚೆ ಶಿಕ್ಷಕರ ಇಚ್ಛೆಯಂತೆ ಪ್ರತಿ ತೆಗೆಯಿಸಿದ, ತಿದ್ದಿಮಾಡಿಸಿದ ಕೃತಿಗಳನ್ನೂ ಒಟ್ಟೊಟ್ಟಿಗೆ ಇಟ್ಟು ಕಲಾಪ್ರದರ್ಶನಗಳನ್ನು ಏರ್ಪಡಿಸಿದಳು. ಅದರಿಂದ ಶಿಕ್ಷಕರು ಮತ್ತು ರಕ್ಷಕರು ಈ ಶಿಶು ಚಿತ್ರಕಲೆಯ ಕಡೆಗೆ ಒಲಿಯತೊಡಗಿದರು. ೧೯೩೦ರಲ್ಲಿ ನಡೆದ ಒಂದು ಪ್ರದರ್ಶನದಲ್ಲಿ ಮಕ್ಕಳ ಅನೇಕ ಚಿತ್ರಗಳು ಪ್ರತಿಯೊಂದಕ್ಕೆ ೪ ರಿಂದ ೧೨ ಗಿನಿಬೆಲೆಗೆ ವಿಕ್ರಿತವಾದುವು. ಮಕ್ಕಳ ಚಿತ್ರಕೃತಿಗಳಿಗೂ ಬೆಲೆಬರುತ್ತದೆ ಎಂಬುದು ಬಹುಮಂದಿಗೆ ಆಶ್ಚರ್ಯವಾಯಿತು. ಆಕೆಯು ಜೈಲುಗಳಿಗೂ ಹೋಗಿ ಮಹಿಳಾ ಕೈದಿಗಳಿಗೆ ಚಿತ್ರಕಲೆ ಕಲಿಸಿದಳು. ಅದರಿಂದ ಅವರ ವಿಕೃತ ಮನಸ್ಸುಗಳ ಮೇಲೆ ಚಿಕಿ

ತ್ತಿಯ ಪರಿಣಾಮಗಳು ತೋರಿದುವು. ಕಲಾಶಿಕ್ಷಕರ ತರಬೇತಿಗಾಗಿ ಇಂಗ್ಲೆಂಡಿನಲ್ಲಿ ಮಾತ್ರವಲ್ಲದೆ ಕೆನಡಾಕ್ಕೂ ಹೋಗಿ ತರಗತಿಗತಿಗಳನ್ನು ನಡೆಯಿಸಿದಳು. ವಿದ್ಯಾ ಇಲಾಖೆಯಲ್ಲಿ ಕಲಾಶಿಕ್ಷಣದ ಮೇಲ್ವಿಚಾರಕಳಾಗಿ ಉನ್ನತ ಪದವಿಗೇರಿದಳು. ಕಲಾಶಿಕ್ಷಣ ಕುರಿತು ತನ್ನ ಅನುಭವಗಳನ್ನು ಗ್ರಂಥಗಳಾಗಿ ಬರೆದು ಪ್ರಕಟಿಸಿದಳು.

ಇಂಗ್ಲೆಂಡಿನಲ್ಲಿ ಮಕ್ಕಳ ರಕ್ಷಕರಿಗೆ ತಿಳುವಳಿಕೆ, ಶಿಕ್ಷಕರಿಗೆ ತರಬೇತಿ ನೀಡಿ ಉತ್ತೇಜನ ಕೊಡಲು ಕಲಾಶಿಕ್ಷಣ ಸಂಘವು ಸ್ಥಾಪನೆಯಾಯಿತು. ಕಲಾಶಿಕ್ಷಕರಿಗಾಗಿ ತರಬೇತಿ ಕೇಂದ್ರಗಳನ್ನು ಸ್ಥಾಪಿಸುವುದು, ಕಲಾಶಿಕ್ಷಣವನ್ನು ಕುರಿತು ವಿಚಾರಗೋಷ್ಠಿಗಳನ್ನು ಏರ್ಪಾಡಿಸುವುದು, ಎಲ್ಲಾ ನಗರಗಳಲ್ಲಿಯೂ ಚಿತ್ರಕಲಾ ಪ್ರದರ್ಶನಗಳನ್ನು ನಡೆಯಿಸುವುದು, ರಕ್ಷಕರಿಗೆ ಅದನ್ನು ಕುರಿತು ಸೂಕ್ತ ಜ್ಞಾನ ನೀಡುವುದು ಮುಂತಾದ ಚಟುವಟಿಕೆಗಳಲ್ಲದೆ ಆ ಸಂಘವು ಕಲಾಶಿಕ್ಷಣ ಕುರಿತು ಒಂದು ಪತ್ರಿಕೆಯನ್ನೂ ಹೊರಡಿಸಿತು. ಆ ಸಂಘಕ್ಕೆ ಡಾ|| ಹರ್ಬರ್ಟ್ ರೀಡ್ ಎಂಬಾತನು ಅಧ್ಯಕ್ಷನಾಗಿದ್ದನು. ಆತನು "ಕಲೆಯ ಮೂಲಕ ವಿದ್ಯಾಭ್ಯಾಸ" Education through Art ಎಂಬ ಅಮೂಲ್ಯ ಗ್ರಂಥವನ್ನು ಬರೆದಿದ್ದಾನೆ ಅಲ್ಲದೆ ಡಾ. ವಿಲ್‌ಹೆಮ್ ವಯಾಲಾ ಎಂಬಾತನು ಸಿಜೆಕನ ಸಹಾಯಕನಾಗಿ ಕೆಲಸಮಾಡಿದನು. ಅಲ್ಲಿಯ ಕಲಾಶಿಕ್ಷಣ ವಿಧಾನವನ್ನು ಕುರಿತು ಆಳವಾಗಿ ಮತ್ತು ವಿಸ್ತಾರವಾಗಿ ಅಭ್ಯಾಸ ಮಾಡಿ " ಶಿಶುಚಿತ್ರಕಲೆ " [Child Art] ಎಂಬ ಉತ್ತಮವಾದ ಪುಸ್ತಕವನ್ನು ಬರೆದು ಪ್ರಕಟಪಡಿಸಿದನು. ಇವರಿಗಿಂತ ಹಿಂದೆ Ebzeer Cooke ಮತ್ತು ಇತರರು ಕೂಡ ಕಲಾಶಿಕ್ಷಣ ಪದ್ಧತಿಯ ಸುಧಾರಣೆಗಾಗಿ ಯತ್ನಿಸಿದ್ದರು.

ಆ ಕಲಾಶಿಕ್ಷಣ ಸಂಘದವರು ಮಾತ್ರವಲ್ಲ, ಇತರ ಅಧ್ಯಾಪಕರು, ವಿದ್ಯಾ ಇಲಾಖೆಯವರು, ಮನಶ್ಶಾಸ್ತ್ರಜ್ಞರು, ಕಲಾವಿಮರ್ಶಕರು ಕೂಡ ಈ ಹೊಸಹಾದಿಯ ಕಾರ್ಯಕಲಾಪಗಳಲ್ಲಿ ವಿಶೇಷವಾದ ಆಸಕ್ತಿಗಳನ್ನು ವಹಿಸಿದರು. ಫಲಸ್ವರೂಪವಾಗಿ ಲಂಡನ್ನಿನಲ್ಲಿ ಮಕ್ಕಳ ಕಲಾಕೃತಿಗಳ ಶಾಶ್ವತವಾದ ಚಿತ್ರಕಲಾಸಂಗ್ರಹಾಲಯವೊಂದು ಸ್ಥಾಪಿಸಲ್ಪಟ್ಟಿತು.

**ಅಮೆರಿಕಾದಲ್ಲಿ**—ಈ ಕ್ರಾಂತಿಕಾರಿ ಚಿತ್ರಕಲಾಶಿಕ್ಷಣ ಪದ್ಧತಿಯು ಇಂಗ್ಲೆಂಡಿಗೆ ಮಾತ್ರ ಸೀಮಿತವಾಗಿರಲಿಲ್ಲ. ಈ ಶತಮಾನದ ಆದಿಭಾಗದಲ್ಲಿ ಅಮೆರಿಕಾದಲ್ಲೂ ಉತ್ಸಾಹಿ ಮಹನೀಯರ ಮತ್ತು ಮಹಿಳೆಯರ ದೆಸೆಯಿಂದ ಇದು ರೂಢಿಗೆ ಬಂದಿತು. ಅಂತಹ ಪ್ರವರ್ತಕರಲ್ಲಿ ಆರ್ಥರ್‌ವೆಸ್ಲಿ ಡೋ ಎಂಬಾತನು ಪ್ರಧಾನವಾಗಿದ್ದನು. ಅಮೆರಿಕಾದ ವಿದ್ಯಾಸಂಸ್ಥೆಗಳು ಈ ಶಿಕ್ಷಣಕ್ಕೆ ಅಗತ್ಯವಾದ ಉಪಕರಣಗಳಿಂದ ಸುಸಜ್ಜಿತವಾಗಿವೆ. ಅಲ್ಲಿ ಶಾಲೆಗಳಲ್ಲಿ ಮಾತ್ರವಲ್ಲ ಬಾಲವಿಹಾರಗಳಲ್ಲಿ, ಮಕ್ಕಳ ಪುಸ್ತಕಾಲಯಗಳಲ್ಲಿ ಕೂಡ ಚಿತ್ರರಚನೆಗಾಗಿ ಸ್ಥಳಾವಕಾಶಗಳನ್ನು ಏರ್ಪಡಿಸಿ ಉಪಕರಣಗಳನ್ನು ಒದಗಿಸಿರುವುದು ತುಂಬಾ ಉತ್ತೇಜನಕರವಾಗಿದೆ. ಮೂರು ನಾಲ್ಕು ಮಕ್ಕಳು ಒಟ್ಟಾಗಿ ವಿಶಾಲವಾದ ಗೋಡೆಗಳಮೇಲೆ ದೊಡ್ಡದಾದ ಚಿತ್ರರಚನೆಯಲ್ಲಿ ಮಗ್ನರಾಗಿರುವುದನ್ನು ಅಲ್ಲಲ್ಲಿ ಕಾಣಬಹುದು. ಮೆತ್ತಗಾದ ಬಣ್ಣಗಳನ್ನು ಅವರ ಕೈ ಬೆರಳುಗಳಿಂದ ಹಚ್ಚಿ ಚಿತ್ರಿಸುವುದೂ ಉಂಟು. ಅಲ್ಲದೆ ಅಮೆರಿಕಾದಲ್ಲಿ "ವಿಶ್ವ ಮೈತ್ರಿಗಾಗಿ ಕಲೆ" ಎಂಬ ಒಂದು ಸಂಘವಿದೆ. ಅವರು ಅಲ್ಲಿಯ ಮಕ್ಕಳ ಚಿತ್ರಗಳನ್ನು ದೇಶ ವಿದೇಶಗಳಿಗೆ ಕಳುಹಿಸುತ್ತಾರೆ. ಬದಲಾಗಿ ಇತರ ದೇಶಗಳ ಮಕ್ಕಳ ಚಿತ್ರಗಳನ್ನು ತರಿಸಿ ತಮ್ಮ ದೇಶದ ನಗರಗಳಲ್ಲಿ ಪ್ರದರ್ಶಿಸುತ್ತಾರೆ.

**ಯುರೋಪಿನಲ್ಲಿ**—ನ್ಯೂರ್ಯಸಿಚ್ ನಗರದ ವಿದ್ಯಾಧಿಕಾರಿಯೊಬ್ಬರು ಈ ಶತಮಾನದ ಆರಂಭದಲ್ಲಿ ಅರವತ್ತು ಸಾವಿರ ಶಾಲಾ ಮಕ್ಕಳಿಂದ ನೂರಾರು ಮೂರು ಲಕ್ಷಕ್ಕೂ ಮಿಕ್ಕಿ ಚಿತ್ರಗಳನ್ನು ಸಂಗ್ರಹಿಸಿ ಪರಿಶೀಲಿಸಿದರು. ಅಷ್ಟು ದೊಡ್ಡರಾಶಿಯನ್ನು ಲಕ್ಷ್ಯ ಪೂರ್ವಕ ಪರಿಶೀಲಿಸಿ ಪುನಃ ಪುನಃ ಗೋಚರವಾದ ಸಾಮಾನ್ಯ ಗುಣ ಲಕ್ಷಣಗಳನ್ನು ಕಂಡುಹಿಡಿದು ಸಿದ್ಧಾಂತಗಳನ್ನು ನಿರ್ಮಿಸುವುದೊಂದು ಅದ್ಭುತವಾದ ಕೆಲಸವಾಗಿದೆ. ಅದರ ಫಲವಾಗಿ "ಕಲಾಪ್ರತಿಭೆಯ ಬೆಳವಣಿಗೆ" ಎಂಬ ಗ್ರಂಥವೊಂದನ್ನು ಪ್ರಕಟಿಸಲಾಯಿತು. ಕಿಂಚಿತ್ತಾದರೂ ವಯಸ್ಕರ ಪ್ರಭಾವ ಬೀಳದ ಚಿಕ್ಕಮಕ್ಕಳ ಚಿತ್ರಗಳು ಮಾತ್ರ ಪರಿಶೀಲನೆಗೆ ಅರ್ಹವಾದವು. ಈ ದೃಷ್ಟಿಯಿಂದ ಅವೆಲ್ಲವೂ ಶುದ್ಧವಾದ ಚಿತ್ರಕಲೆಯಾಗಿಲ್ಲದಿರಬಹುದು. ಆದರೂ ಪರಿಶೀಲಿಸಿದ ಚಿತ್ರಸಂಖ್ಯೆಯು ಮಹತ್ತಾದ ಕಾರಣ ಕಂಡು ಬಂದ ಸಿದ್ಧಾಂತಗಳು ಅಂಗೀಕಾರಾರ್ಹವಾಗಿವೆ.

**ವಿಯೆನ್ನಾದಲ್ಲಿ**-೧೮೯೭ ರಲ್ಲಿ ಶಿಶುಚಿತ್ರಕಲಾತರಗತಿಯನ್ನು ತೆರೆದು ಆಚರಿಸಿ ತೋರಿಸಿದ ಮಹಾವ್ಯಕ್ತಿಯು ವಿಯೆನ್ನಾದ ಪ್ರೊ. ಸಿಜೆಕನೆಂಬುವನು. ಆತನ ನವೀನ ಕಲಾಶಿಕ್ಷಣ ಪದ್ಧತಿಯ ಕುರಿತು ಆಗಿನ ಜನರಿಗೆ ಮತ್ತು ಸರಕಾರಕ್ಕೆ ನಂಬುಗೆ ಇರಲಿಲ್ಲ. ಆತನಿಗೆ ಪ್ರೋತ್ಸಾಹ, ಪೋಷಣೆಗಳು ಸಿಗದೆ ಕಷ್ಟ, ನಷ್ಟ, ನಿಸ್ಸಾರಗಳನ್ನು ಅನುಭವಿಸಬೇಕಾಯಿತು. ಆದರೂ ಆತನು ಧೃತಿಗೆಡದೆ ಆ ಕಲಾ ಶಿಕ್ಷಣದಿಂದ ಮಕ್ಕಳ ಮಾನಸಿಕ ಬೆಳವಣಿಗೆಯ ಪ್ರಯೋಜನಗಳನ್ನೂ, ಮಕ್ಕಳ ಚಿತ್ರಗಳು ಕಲಾತ್ಮಕವಾಗಿವೆ ಎಂಬುದನ್ನೂ ಜಗತ್ತಿಗೆ ತೋರ್ಪಡಿಸಿದನು. ಆತನ ಪ್ರಯೋಗವು ಸಫಲವಾಯಿತು. ಅದನ್ನು ವಿಶ್ವವು ಕಣ್ತೆರದು ನೋಡಿತು. ಆತನನ್ನು ಶಿಶು ಚಿತ್ರ ಕಲಾಪಿತನೆಂಬುದಾಗಿ ಕರೆದರು. ಅದೇಕಾಲದಲ್ಲಿ ಜನರು ಆದಿ

ಮಾನವ ಚಿತ್ರಕಲೆಯನ್ನು ಗೌರವಿಸತೊಡಗಿದ್ದರು; ಆ ದೆಸೆಯಿಂದ ಚಿಕ್ಕಮಕ್ಕಳ ಚಿತ್ರಗಳು ಕೂಡ ಚಿತ್ರಕಲೆ ಎಂಬುದಾಗಿ ಜಗತ್ತಿನ ಎಲ್ಲಾ ದೇಶಗಳಲ್ಲೂ ಬೇಗನೆ ಮಾನ್ಯತೆ ಪಡೆಯುವಂತಾಯಿತು.

ಮುಂದರಿದ ದೇಶಗಳಲ್ಲೆಲ್ಲಾ ಇದೇ ಬಗೆಯ ಸಂಶೋಧನಾ ಕಾರ್ಯಗಳು ಧಾರಾಳವಾಗಿ ನಡೆಯುತ್ತಿವೆ. ೧೯೦೪ ರಲ್ಲಿ ಎಸ್. ಲೆವಿನ್‌ಸ್ಟನ್ ಎಂಬುವರು "ಮಕ್ಕಳ ಚಿತ್ರಶೋಧನೆಗಳು" ಎಂಬ ಗ್ರಂಥವನ್ನು ಬರೆದರು. ಅದರಲ್ಲಿ "ಮಗುವು ತಾನು ಏನನ್ನೋ ಹೇಳಬೇಕೆಂಬ ಬಯಕೆಯ ಕಾರಣ ಚಿತ್ರಿಸುತ್ತದೆ. ಚಿತ್ರಿಸುವು ದೆಂದರೆ ಪ್ರತಿರೂಪವೆಂದು ಅರ್ಥವಲ್ಲ, ವಿವರಿಸುವುದು, ತಿಳಿಸುವುದು 'to draw means to describe' ಎಂದು ಅರ್ಥವಾಗಿದೆ. ಗುರುತು ಮತ್ತು ಚಿತ್ರಗಳು ಮಗುವಿನ ಭಾಷೆಯಾಗಿವೆ," ಎಂಬುದಾಗಿ ಬರೆದಿರುವರು. ಇತರ ದೇಶಗಳಲ್ಲಿ ಹಲವುಕಡೆ ಬಣ್ಣ ಸಾಮಗ್ರಿಗಳನ್ನಲ್ಲದೆ ಹುಲ್ಲುಕಡ್ಡಿ, ವಸ್ತ್ರದಚೂರು ಮೊದಲಾದುವು ಗಳನ್ನು ಒದಗಿಸಿ ಇಷ್ಟಾನುಸಾರ ಬಳಸುವಂತೆ ಮಾಡಿ ಪ್ರತಿರಚನೆ ಮಾಡಿಸುತ್ತಾರೆ. ಈಗ ಜಗತ್ತಿನಲ್ಲಿ ಸರ್ವತ್ರ ಹಬ್ಬುತ್ತಿರುವ ಈ ಶಿಶುಚಿತ್ರ ಕಲಾಕ್ರಾಂತಿಗೆ ಆರಂಭದಲ್ಲಿ ಯೂರೋಪು, ಅಮೇರಿಕಾ ಮೊದಲಾದ ಎಲ್ಲಾ ದೇಶಗಳಲ್ಲೂ ಆಕ್ಷೇಪಗಳಿದ್ದವು. ಈಗ ಆ ವಿರೋಧ ಭಾವನೆ ನಿವಾರಣೆಯಾಗಿದೆ. ಜಗತ್ತಿನ ಎಲ್ಲಾ ರಾಷ್ಟ್ರ ಗಳವರೂ ಈ ವಿಧಾನವನ್ನು ವಿಶ್ವಾಸ ಪೂರ್ವಕವಾಗಿ ಆಚರಣೆಗೆ ತಂದಿದ್ದಾರೆ.

**ಭಾರತದಲ್ಲಿ**—ನಮ್ಮ ದೇಶದ ರಾಜಧಾನಿಯಾದ ಡಿಲ್ಲಿಯಲ್ಲಿ ವರುಷಕ್ಕೊಮ್ಮೆ ಎಲ್ಲಾ ರಾಜ್ಯಗಳಿಂದಲೂ ಬಹುಮಂದಿ ಮಕ್ಕಳು ಒಂದುಸೇರಿ ಸ್ಥಳದಲ್ಲೇ ಚಿತ್ರರಚಿಸುವ ಸ್ಪರ್ಧೆಯೂ ಅಂತರ ರಾಷ್ಟ್ರೀಯ ಮಕ್ಕಳ ಚಿತ್ರಕಲಾಪ್ರದರ್ಶನವೂ ಉತ್ಸವಗಳಂತೆ

ಗಣ್ಯ ಪ್ರಮಾಣದಲ್ಲಿ ಜರುಗುತ್ತವೆ. ಇತ್ತೀಚೆ ಇತರ ನಗರಗಳಲ್ಲೂ ಶಿಶುಚಿತ್ರಕಲಾಪ್ರದರ್ಶನಗಳು ನಡೆಯತೊಡಗಿವೆ.

ವಿದ್ಯಾಭ್ಯಾಸಕ್ರಮಗಳನ್ನು ಉತ್ತಮಗೊಳಿಸಲು ಎಲ್ಲಾ ದೇಶಗಳಲ್ಲೂ ತಜ್ಞರ ಸಲಹಾ ಸಮಿತಿಗಳನ್ನು ಆಗಾಗ ನೇಮಿಸುತ್ತಾರೆ. ಅವರು ಕೂಲಂಕಷವಾಗಿ ಪರಿಶೀಲಿಸಿ ವರದಿಗಳನ್ನು ಒಪ್ಪಿಸುವುದು ನಡೆದು ಬಂದ ಕ್ರಮವಾಗಿದೆ. ೭೦ ವರುಷಗಳ ಹಿಂದೆ ಕಲಾಶಿಕ್ಷಣ ಕುರಿತು ಬ್ರಿಟನ್ನಿನ ಒಂದು ವಿದ್ಯಾಸಮಿತಿಯವರು ಹೀಗೆ ಅಭಿಪ್ರಾಯ ತಿಳಿಸಿದ್ದರು:—

"ಹಿಂದಿನಿಂದ ನಿರ್ಧಾರವಾಗಿ ಅಭ್ಯಾಸ ವಿಷಯಗಳಾದ ವಿಜ್ಞಾನ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಇತಿಹಾಸ, ಭೂಗೋಳ ಮೊದಲಾದ ಪಾಠಗಳಲ್ಲಿಯೂ, ಮರಗೆಲಸ ಮತ್ತು ಇತರ ವೃತ್ತಿ ಪಾಠಗಳಲ್ಲೂ ಚಿತ್ರಕಲಾಜ್ಞಾನವು ಉಪಯೋಗವಾಗುತ್ತದೆ. ಚಿತ್ರಪಾಠದಿಂದ ವಿವರಗಳ ಪರಿಶೀಲನಾ ಶಕ್ತಿಯು ಹೆಚ್ಚುತ್ತದೆ. ಮಕ್ಕಳಿಗೆ ಭಾವಪ್ರಕಟಣೆಗೊಂದು ಅವಕಾಶವನ್ನು ಕಲ್ಪಿಸಿ ಕೊಡುವುದಲ್ಲದೆ ಸುತ್ತಲಿನ ಪ್ರಕೃತಿಸೌಂದರ್ಯವನ್ನು ನೋಡಲು, ಅನುಭವಿಸಲು ಜ್ಞಾನವನ್ನುಂಟುಮಾಡುತ್ತದೆ. ದೃಷ್ಟಾಂತ ಚಿತ್ರ, ಭೂಪಟ ಮೊದಲಾದವುಗಳನ್ನು ತಿಳಿದುಕೊಳ್ಳಲು ಮತ್ತು ರಚಿಸಲು ಸಮರ್ಥನಾಗುತ್ತಾನೆ. ಆದುದರಿಂದ ಚಿತ್ರಪಾಠದಲ್ಲಿ ವಸ್ತುಚಿತ್ರ, ಅಲಂಕಾರ ನಮೂನೆಗಳು, ಸ್ಮರಣ ಚಿತ್ರ [Memory Drawing], ಯಂತ್ರಭಾಗ ಮತ್ತು ಭೂಮಿತಿ ಚಿತ್ರಗಳನ್ನು ರಚಿಸಲು ಕಲಿಸಬೇಕು."

ಆದರೆ ಅನಂತರದ ಇಪ್ಪತ್ತು ವರುಷಗಳೊಳಗೆ ವಿದ್ಯಾತಜ್ಞರ ಸಮಿತಿಗಳ ಮನೋಭಾವನೆಗಳೇ ಬೇರೆಯಾದುವು.

ನಕಾಶೆ ಬರೆಯುವ ತರಬೇತಿಯು ಉಪಯೋಗಕರವಾದರೂ

ಅದು ಚಿಕ್ಕಮಕ್ಕಳ ಕಲಾಶಿಕ್ಷಣದ ಉದ್ದೇಶವಾಗಿರಬಾರದು. ಪ್ರತಿ ಮಗುವಿನಲ್ಲೂ ಚಿತ್ರ ರಚನೆ ಹಾಗೂ ವಸ್ತು ನಿರ್ಮಾಣದ ಅಪೇಕ್ಷೆಯು ಸಹಜವಾಗಿ ಇರುತ್ತದೆ. ಆತನು ಬರೆಯುವುದು ಕಲಿಯುವುದ ಕ್ಕಿಂತ ಮೊದಲು ಸುತ್ತಮುತ್ತಲಿನ ವಿಷಯಗಳಮೇಲೆ ತನ್ನ ಭಾವ ನೆಗಳನ್ನು ಚಿತ್ರದ ಮೂಲಕ ವ್ಯಕ್ತಗೊಳಿಸುತ್ತಾನೆ. ಉತ್ತೇಜನ ಕೊಟ್ಟು ಕಲ್ಪನಾ ಸಾಮರ್ಥ್ಯವನ್ನು ಬೆಳೆಯಿಸಬೇಕು. ಮಗುವಿನ ಅನಿರ್ಬಂಧ ಭಾವಪ್ರಕಟಣೆಯ ಸತ್ಫಲಗಳಾದ ಉತ್ಸಾಹ, ಚಟು ವಟಿಕೆ, ನವೀನತೆ, ಸ್ವಯಂಪ್ರೇರಿತ ಗುಣಗ್ರಾಹಿ ಚಿತ್ರಗಳು ರೂಪಸಾದೃಶ್ಯ ಉಳ್ಳ ಅನುಕೃತಿ [Copy] ಗಳಿಗಿಂತ ಹೆಚ್ಚು ಮಹತ್ವದ್ದಾಗಿವೆ. ದೊಡ್ಡವನಾದಮೇಲೆ ಕೂಡ ಭಾವನಾಸೂಚಕ ವಾದ, ಕಲ್ಪನಾ ಪ್ರಧಾನವಾದ ಚಿತ್ರರಚಿಸುವುದಾದರೆ ಅದಕ್ಕಾಗಿ ಉತ್ತೇಜನ ನೀಡಬೇಕು. ಕಲಾತಂತ್ರ ಜ್ಞಾನಪೂರ್ವಕ ರಚನೆ ಯಾದ ತದ್ರೂಪ ಚಿತ್ರಗಳು ಮಾತ್ರ ಚಿತ್ರಕೃತಿಗಳೆಂದು ಭಾವಿಸ ಬಾರದು. ಭಾಷೆಯಲ್ಲಿ ವ್ಯಾಕರಣ ಶುದ್ಧ ಉಚ್ಚಾರ ಕಲಿತು ಅನಂತರವೆ ಭಾವನೆಗಳನ್ನು ಪ್ರಕಟಿಸಬೇಕು ಎಂಬುದಾಗಿ ಯಾರೂ ವಿಧಿಸುವುದಿಲ್ಲ. ಈ ನಿಯಮವನ್ನು ಚಿತ್ರರಚನೆಯಲ್ಲೂ ಅನು ಸರಿಸಬೇಕು. ”

ಪ್ರಾಥಮಿಕ ವಿದ್ಯಾಭ್ಯಾಸದಲ್ಲಿ ಕಲಾಶಿಕ್ಷಣ ಕುರಿತು ಇಷ್ಟನ್ನು ಹೇಳಿದುದಲ್ಲದೆ ಮೇಲಿನ ದರ್ಜೆಗಳಲ್ಲಿಯೂ “ ಭಾಷೆ, ಲೆಕ್ಕ, ವಿಜ್ಞಾನ ಪಾಠಗಳಿಂದ ಬೌದ್ಧಿಕ ಶಿಕ್ಷಣ ಕೊಡುವಂತೆ ಲಲಿತ ಕಲಾ ಶಿಕ್ಷಣವು ಕೂಡ ಅಗತ್ಯವಾದುದು ಎಂಬುದಾಗಿ (ಸ್ಪೆನ್ಸ್ ರಿಪೋರ್ಟ್) ನಲ್ಲಿ ಉಲ್ಲೇಖಿಸಿದ್ದಾರೆ. ಈ ಕಲಾಜ್ಞಾನವು ಜೀವನದಲ್ಲಿ ನಿತ್ಯೋಪಯೋಗಿ ವಸ್ತುಗಳು, ಕಟ್ಟಡ, ಶೃಂಗಾರ, ವೃತ್ತಿ, ನಡೆನುಡಿ, ಎಲ್ಲವರಮೇಲೂ ಪ್ರಭಾವ ಬೀರಿ, ಸುಂದರ

ಸಭ್ಯಜೀವನವನ್ನು ನಡೆಯಿಸಲು ಯೋಗ್ಯತೆಯನ್ನುಂಟುಮಾಡು ತ್ತದೆ. ವಸ್ತ್ರಗಳನ್ನು ಉಪಯೋಗಕರವಾಗಿ ಮಾತ್ರ ಮಾಡಿದರೆ ಸಾಲದು ಸುಂದರವಾಗಿ ನಿರ್ಮಿಸುವ ದೃಷ್ಟಿ ಕೂಡ ಇರಬೇಕು. ”

The Hadow report ನಲ್ಲಿ ಕಲಾಶಿಕ್ಷಣದಿಂದ ಕಲ್ಪನಾ ಗುಣಾಭಿವೃದ್ಧಿಯಾಗುವುದೆಂದು ಹೇಳಿರುವುದಲ್ಲದೆ, ವಿರಾಮಕಾಲದ ಸದುಪಯೋಗ ವಾಗಬಲ್ಲುದು. ರಾಷ್ಟ್ರದ ಕೈಗಾರಿಕೆ, ಉದ್ಯಮ, ವಸ್ತ್ರಗಳ ಸೌಂದರ್ಯ ಮಟ್ಟ ಉನ್ನತವಾಗುವುದು ಇದು ಆದೊಂದು ಮಹತ್ವದ ವಿಷಯ, ಎಂಬುದಾಗಿಯೂ ಹೇಳಿರುತ್ತಾರೆ. ಇತರ ದೇಶಗಳಲ್ಲಿ ಅನೇಕ ಮಂದಿ ಉನ್ನತ ಪದವಿಯಲ್ಲಿರುವವರು, ಸಂಪನ್ನರು, ಚರ್ಚಿಲ್, ಅಮೆರಿಕಾದ ಅಧ್ಯಕ್ಷ ಐಸೆನ್ ಹೋವರ್ ಮೊದಲಾದ ಅದ್ವಿತೀಯ ರಾಜಕಾರಣಿಗಳು ಕೂಡ ಚಿತ್ರರಚನೆಯನ್ನು ವಿರಾಮ ಕಾಲದ ಒಂದು ಕಸಬನ್ನಾಗಿ ಮಾಡಿಕೊಂಡಿದ್ದಾರೆ. ಅಂಥವರು ಕೆಲವರು ಭಾನುವಾರದ ಕಲಾವಿದರು. [Sunday Painters] ಅನಿಸಿಕೊಂಡರೂ ಉತ್ತಮ ಕಲಾವಿದರಾಗಿದ್ದಾರೆ.

ಮೇಲೆ ಹೇಳಿದಂತೆ ಸರಕಾರವು ನೇಮಿಸಿದ ವಿದ್ಯಾಸಮಿತಿಗಳಲ್ಲದೆ ವಿದೇಶಗಳಲ್ಲಿ ರಾಷ್ಟ್ರೀಯ ಕಲಾಶಿಕ್ಷಕರ ಸಂಘ, ಕಲಾಶಿಕ್ಷಣ ಸಮಿತಿಗಳು ಮತ್ತು ಅಲ್ಲಲ್ಲಿ ಕಲಾ ಅಧ್ಯಾಪಕರ ಗಿಲ್ಡುಗಳೂ ಏರ್ಪಟ್ಟು ಕಲಾ ಶಿಕ್ಷಣವನ್ನು ಕುರಿತು ಪ್ರಯೋಗ, ಸಂಶೋಧನೆಗಳನ್ನು ಆಸಕ್ತಿಯಿಂದ ಮಾಡುತ್ತಿದ್ದಾರೆ.

**ಶಿಶುಚಿತ್ರಕಲಾಶಿಕ್ಷಕ**

ಅಧ್ಯಾಪಕನು ತಯಾರುಮಾಡುವವನಲ್ಲ, ಹುಟ್ಟುಗುಣವುಳ್ಳವನು ಎಂಬ ಮಾತು ಚಿಕ್ಕಮಕ್ಕಳ ಕಲಾಶಿಕ್ಷಕನಿಗೆ ವಿಶೇಷವಾಗಿ ಅನ್ವಯಿಸುವುದು. ಉತ್ತಮ ಕಲಾವಿದರೆಲ್ಲರೂ ಉತ್ತಮ ಕಲಾ

ಶಿಕ್ಷಕರೆಂದೂ ಆಗಲಾರರು. ಕಲಾಶಿಕ್ಷಕನು ಮಗುವಿಗೆ ಪ್ರಭುವಿನಂತೆ ಇರಬಾರದು; ಸಹೋದ್ಯಮಿ, ಸಹಪಾಠಿಯಂತೆ ಇರಬೇಕು.

**ಉದ್ದೇಶ:**—ಚಿತ್ರಕಲಾಶಿಕ್ಷಣದ ಉದ್ದೇಶವು ಗೋಡೆಗಳ ಮೇಲೆ ಅಲಂಕಾರಕ್ಕಾಗಿ ತೂಗುಹಾಕುವ ಚಿತ್ರಗಳನ್ನು ಮತ್ತು ಹಿರಿಯರ ರೂಪಚಿತ್ರಗಳನ್ನು ರಚಿಸಲು ತರಬೇತು ಮಾಡುವುದಲ್ಲ. ಕಲಾಶಿಕ್ಷಣವು ಮಗುವಿನಲ್ಲಿ ಕಲ್ಪನಾಶಕ್ತಿ ಮತ್ತು ರಚನಾ ಗುಣಗಳನ್ನು ಹೆಚ್ಚಿಸಬೇಕು. ವ್ಯಕ್ತಿತ್ವವನ್ನು ಪೂರ್ಣಗೊಳಿಸಲು ನೆರವಾಗಬೇಕು. ಆ ಉದ್ದೇಶಪೂರ್ತಿಗಾಗಿ ತಕ್ಕ ಪರಿಸ್ಥಿತಿಯನ್ನು ನಿರ್ಮಿಸಬೇಕು. ಆಯಾ ವಯಸ್ಸಿಗೆ ತಕ್ಕುದಾದ ಅಭ್ಯಾಸಗಳು ಪೂರ್ತಿಯಾಗಿಯೇ ಮೇಲಿನ ಹಂತವನ್ನು ತಲುಪಬೇಕು. ಅದಕ್ಕಿಂತ ಮುಂಚೆಯೇ ಮುಂದಿನ ಮೆಟ್ಟಲಿಗೆ ಮುಟ್ಟಿಸಿದರೆ ಅಭಿವೃದ್ಧಿಯು ಕುಂಠಿತವಾಗುವುದು. ವ್ಯಕ್ತಗೊಳಿಸುವುದು ವ್ಯಕ್ತಿಯ ಲಕ್ಷಣ. ಮಗುವಿನಲ್ಲಿ ಆ ಗುಣಕ್ಕೆ ಪ್ರಾಮುಖ್ಯತೆ ಕೊಡದಿದ್ದರೆ ಲಕ್ಷ್ಯವನ್ನು ಅಲಕ್ಷಿಸಿ ಉಪಕರಣಗಳನ್ನು ಉಪಚರಿಸಿದಂತಾಗುವುದು. ಈ ಹಿಂದೆ ಮಾಡಿಸುತ್ತಿದ್ದ ಚೌಕ, ಆಯತ, ವೃತ್ತ, ತ್ರಿಕೋಣ ಮೊದಲಾದ ಸರಳವಾದ ಆಕೃತಿಗಳಿಂದ ಬಳಕೆಯ ವಸ್ತು ಚಿತ್ರ ನಿರೂಪಣೆಯ ಯಾಂತ್ರಿಕ ಶಿಕ್ಷಣ, ಸುಲಭದ ಕೆಲಸ, ಕಡವೆ ಗುಣದ್ದು. ಮಾನಸಿಕ ಚಟುವಟಿಕೆಗಳಲ್ಲಿ ಮಗುವನ್ನು ಪ್ರೇರಿಸಿ ಭಾವಾಭಿವ್ಯಕ್ತಿ ಮಾಡಿಸುವುದು ಕಷ್ಟದ ಕೆಲಸವಾದರೂ ಉತ್ತಮ ಗುಣ. ವಯಸ್ಸಿಗೆ ತಕ್ಕಂತೆ ಆಹಾರವನ್ನು ಕೊಡುತ್ತೇವೆ. ಮಗುವು ಬೇಗ ಬೆಳೆವವನಾಗಲಿ ಎಂದು ವಯಸ್ಕರ ಊಟವನ್ನು ಉಣ್ಣಿಸುವುದಿಲ್ಲ. ವಸ್ತುಜ್ಞಾನ, ವಸ್ತುಶಿಕ್ಷಣ ಕ್ರಮಗಳನ್ನು ಕಲಿಸುವುದು ಮಾತ್ರ ಅಧ್ಯಾಪಕ ಕೆಲಸಗಳಲ್ಲ. ಸದಭ್ಯಾಸಗಳನ್ನೂ, ಕಲಾಕೌಶಲ್ಯಗಳನ್ನೂ, ಇದಿರಾಗುವ ಪರಿಸ್ಥಿತಿಗಳಲ್ಲಿ ವಿವೇಕದಿಂದ

ವರ್ತಿಸುವ ಸಾಮರ್ಥ್ಯವನ್ನೂ ಉಂಟುಮಾಡುವುದು ಶಿಕ್ಷಣದ ಉದ್ದೇಶಗಳಾಗಿವೆ. ಇವುಗಳಿಗಾಗಿ ಮನೋಭಾವ, ರಸಭಾವಗಳನ್ನು [Emotions] ಕುರಿತು ಹಿತಕರವಾಗಿ ವರ್ತಿಸಬೇಕು. ಇದು ಲಲಿತಕಲೆಗಳಿಂದ ಸಾಧ್ಯ. ಆಸಕ್ತಿ ಹುಟ್ಟಿಸಿ ಕೆಲಸ ಮಾಡಿಸಬೇಕು. ಜಾಣ್ಮೆಯಿಂದ ಗುರಿಮುಟ್ಟಿಸಬೇಕು.

ಚಿತ್ರಕಲಾಪಾಠದ ಸಾಫಲ್ಯವನ್ನು ಚಿತ್ರಗಳ ರೂಪ ಸಂಖ್ಯೆಗಳಿಂದ ನಿರ್ಧರಿಸುವುದಲ್ಲ. ಮಕ್ಕಳು ಮನಸ್ಸಿನಲ್ಲಿರುವುದನ್ನು ತಮ್ಮದೇ ಆದ ರೀತಿಯಲ್ಲಿ ಹೇಳಲಿಚ್ಛಿಸಿ ತಮ್ಮ ಸಾಮರ್ಥ್ಯಗಳನ್ನೆಲ್ಲಾ ಅದಕ್ಕಾಗಿ ವಿನಿಯೋಗಿಸಿ ಆ ರಚನಾಕಾರ್ಯದಲ್ಲಿ ತಲ್ಲೀನರಾಗಬೇಕು. ಮಗುವು ಚಿತ್ರಿಸುವ ತನ್ನ ಪ್ರಯತ್ನದಲ್ಲಿ ತನ್ನ ಭಾವನೆಗಳನ್ನೂ ಅನುಭವಗಳನ್ನೂ, ವಿಚಿತ್ರವಾದ ಕಲ್ಪನೆಗಳನ್ನೂ, ಊಹೆಗಳನ್ನೂ ನಿರಾತಂಕವಾಗಿ ಚಿತ್ರಿಸಲು ಬಿಡಬೇಕು. ಯೂರೋಪು, ಅಮೆರಿಕಾ, ಜಪಾನು, ಚೈನಾ ಮೊದಲಾದ ಮುಂದುವರಿದ ಎಲ್ಲಾ ರಾಷ್ಟ್ರಗಳಲ್ಲೂ ಕಲಾತರಗತಿಯಲ್ಲಿ ಇಂತಹ ಕಾರ್ಯಮಗ್ನತೆಯನ್ನು ಕಾಣಬಹುದು.

**ಬೋಧನಾಕ್ರಮ**–ಕಲಾಶಿಕ್ಷಣಕ್ಕಾಗಿ ಕ್ರಮಬದ್ಧಸೋಪಾನ ಪದ್ಧತಿಯಲ್ಲಿ ಅಭ್ಯಾಸಗಳನ್ನು ನಿರ್ಧರಿಸಿ ಕೊಡಲು ಸಾಧ್ಯವಿಲ್ಲ. ಎಲ್ಲಾ ಭಾವನೆಗಳು ಮತ್ತು ಎಲ್ಲಾ ಪಾಠಗಳು ಚಿತ್ರಗಳಿಂದ ವ್ಯಕ್ತವಾಗಬಹುದು. ಮಕ್ಕಳಿಗೆ ಅಭಿರುಚಿಯ ಒಂದು ಕಥೆ ಹೇಳುವಿಕೆ, ಪದ್ಯ ಹಾಡುವಿಕೆ, ತೋಟಗಾರಿಕೆ ಅಥವಾ ಯಾವುದಾದರೂ ಚಟುವಟಿಕೆಯ ಕುರಿತು ಸಂಭಾಷಣೆಯ ಮೂಲಕ ಚಿತ್ರರಚನೆಗಾಗಿ ವಿಷಯಗಳನ್ನು ಪ್ರೇರಿಸಬೇಕು. ಹೀಗೆ ಅಡಿದ ಮಾತುಕತೆ, ಸಮಾಚಾರಗಳಲ್ಲಿ ಮಕ್ಕಳು ತಮಗೆ ಇಷ್ಟಬಂದ ಘಟನೆಗಳನ್ನು ಆರಿಸಿ ಚಿತ್ರ ರಚಿಸಬಹುದು. ವಿಷಯಗಳನ್ನು ಕರಿಹಲಗೆಯ

ಮೇಲೆ ಬರೆದು ಮಕ್ಕಳ ಗ್ರಹಣಶಕ್ತಿಗನುಸರಿಸಿ ಕೆಲಸನ್ನು ಎತ್ತಿ ಚರ್ಚಿಸಬಹುದು. ಊರಿನ ಜಾತ್ರೆ, ಹಬ್ಬ, ಸರ್ಕಸ್ಸು, ಸಮಾರಂಭ ಗಳನ್ನು ಕುರಿತು, ಆಟ, ಓಟ, ನಾಟಕ, ನೃತ್ಯ, ವಿವಿಧ ವಿನೋದಾವಳಿ ಮೊದಲಾದ ಚಟುವಟಿಕೆಗಳನ್ನು ಕುರಿತು, ಮನೆಗೆ ಬಂದ ನೆಂಟರಿಷ್ಟರನ್ನು ಉಪಚರಿಸುವಿಕೆ, ಅಧ್ಯಾಪಕರನ್ನು ಅಥವಾ ಮೇಲಿನ ದರ್ಜೆಯವರನ್ನು ಶಾಲೆಯಿಂದ ಬೀಳ್ಕೊಡುವ ಸಮಾರಂಭ, ಮಳೆಗಾಲ ಮೊದಲಾದವುಗಳ ವಿಷಯು ವಾಗಿ ಪರಸ್ಪರ ಮಾತುಕತೆಗಳನ್ನಾಡಿದರೆ ಚಿತ್ರಿಸಲು ಸನ್ನಿವೇಶ ಗಳನ್ನು ಪ್ರೇರಣೆ ಮಾಡಿದಂತಾಗುವುದು. ಸೃಜನಾತ್ಮಕ ಚಟು ವಟಿಕೆಯು ಅಂತರ್ಯದಿಂದ ಬರಬೇಕು; ಇತರರು ವಿಧಿಸಿ ಬರುವುದಲ್ಲ. ಅಧ್ಯಾಪಕನು ತನ್ನ ಚಾತುರ್ಯದಿಂದ ಮಕ್ಕಳನ್ನು ಪ್ರೇರಿಸಿ ಅವ ರಿಂದ ಕೃತಿರಚನೆ ಮಾಡಿಸುವ ಮಾರ್ಗಗಳನ್ನು ಕಂಡುಕೊಳ್ಳ ಬೇಕು. ಭಾವನೆ, ಊಹಾ ಶಕ್ತಿಗಳು ಕೆಲವರಲ್ಲಿ ಹೆಚ್ಚು, ಕೆಲವ ರಲ್ಲಿ ಕಡಮೆ ಇರಬಹುದು. ಅವನ್ನೆಲ್ಲ ಗಮನಿಸಿ ಶಿಕ್ಷಕನು ಸೂಕ್ತ ಸೂಚನೆಗಳನ್ನು ನೀಡಿದಲ್ಲಿ ಚಿತ್ರಿಸಲು ಮಕ್ಕಳಲ್ಲಿ ಅಭಿರುಚಿ, ಆಸಕ್ತಿ, ಉತ್ತೇಜನಗಳು ಜಾಸ್ತಿಯಾಗುವುವು.

**ಸಾರಾಂಶ:**—ಕಲಾತರಗತಿಯಲ್ಲಿ ಅಧ್ಯಾಪಕನ ಪ್ರಥಮ ಮತ್ತು ಪ್ರಧಾನಕಾರ್ಯವೆಂದರೆ ಬಾಲಕರು ಸಂತೋಷದಿಂದ ಮತ್ತು ಆಸಕ್ತಿಯಿಂದ ಕೃತಿರಚನೆಗಳಲ್ಲಿ ತೊಡಗುವಂತೆ ಹಿತಕರವಾದ ವಾತಾವರಣವನ್ನು ನಿರ್ಮಿಸುವುದಾಗಿದೆ. ಅದರಿಂದ ಅವರಿಗೆ ಮೋದ ಮತ್ತು ಬೋಧ ಎರಡೂ ಸಿಗುವಂತೆ ಆಗಬೇಕು.

ಕಿರಿಯರ ಹಾಗೂ ಹಿರಿಯರ ದೃಷ್ಟಿ ಮತ್ತು ಭಾವನೆಗಳೇ ಬೇರೆ ಬೇರೆ. ಮಕ್ಕಳು ತಮ್ಮದೇ ಆದ ವಿಧಾನದಲ್ಲಿ ಚಿತ್ರಿಸುವುದು ಸಹಜ. ಶಿಕ್ಷಕನು ಶಿಶುಚಿತ್ರಗಳನ್ನು ತಿದ್ದತೊಡಗಿದರೆ ತನ್ನ ದೃಷ್ಟಿ

ಮತ್ತು ಭಾವನೆಗಳನ್ನು ಅವರ ಮೇಲೆ ಹೇರಿದಂತಾಗುತ್ತದೆ. ಶಿಕ್ಷಕರು ಏನನ್ನು, ಏಕೆ ತಿದ್ದಿದರು ? ಎಂದು ಆ ಎಳೆಯ ಮಕ್ಕಳು ಅರಿಯಲಾರರು. ಶಿಕ್ಷಕರ ತಿದ್ದುವಿಕೆಯು ಹಿರಿಯರ ದೃಷ್ಟಿಗೆ ಸರಿಯಾದರೂ ಅದರಿಂದ ಚಿತ್ರವು ಸತ್ವಹೀನವಾಗುವುದುಂಟು. ಮಗುವು ಏನನ್ನೋ ಹೇಳಬೇಕೆಂದು ಚಿತ್ರಿಸುತ್ತದೆ. ಅದನ್ನು ವಿಲಕ್ಷಣವಾದುದೆಂದು ತಿಳಿಯದೆ ಅದರಲ್ಲಿರುವ ವಿಶೇಷ ಲಕ್ಷಣ ಗಳನ್ನು ಅರಿಯಲು ಯತ್ನಿಸಬೇಕು. ಸಹೃದಯ ಅಧ್ಯಾಪಕರಲ್ಲಿ ಈ ಶಕ್ತಿಯು ಬೆಳೆಯುವುದು ಮತ್ತು ಅವರು ಪ್ರತಿ ಮಗುವಿನಲ್ಲೂ ಅವರದ್ದೇ ಆದ ಚಿತ್ರಶೈಲಿಯನ್ನು ನೋಡಬಲ್ಲರು.

ಶಿಶುಗಳು ಮಾತನಾಡಿದಾಗ, ಚಿತ್ರಿಸಿದಾಗ ಅನೇಕರು ಅವರ ನಿಷ್ಕಪಟ ಸ್ವಭಾವ, ಸರಳತೆ ಮುಗ್ಧತೆಗಳಲ್ಲಿ ದೈವಿಕಗುಣಗಳನ್ನು ಕಾಣುತ್ತಾರೆ. ಪ್ರೊ. ಸಿಜೆಕನೊಮ್ಮೆ ಅದನ್ನೇ ಹೇಳಿದ್ದನು; " ಕಲಾಶಿಕ್ಷಕರು ಮಗುವಿನಲ್ಲಿ ದೇವರಿದ್ದಾನೆಂದು ತಿಳಿಯಬೇಕು. ಆದಕಾರಣ ಅವರು ಮಗುವಿನೊಡನೆ ನಮ್ರರೂ, ಸ್ವಪ್ರತಿಷ್ಠಾರಹಿತರೂ ಆಗಿ ವರ್ತಿಸಬೇಕು. ಮಗುವು ಯಾವಾಗಲೂ ಸುತ್ತಲಿನ ಪರಿಸ್ಥಿತಿಗನುಸಾರವಾಗಿ ಬೆಳೆಯುತ್ತಿರುವುದು. ಶಿಕ್ಷಕರು ಅದನ್ನು ಪರಿಶೀಲಿಸುತ್ತಿದ್ದು ಮಕ್ಕಳೆಂಬ ಅಂಕುರದ ಹಿತವಾದ ಬೆಳವಣಿಗೆಗೆ ಧಕ್ಕೆ ತಗುಲದಂತೆ ನೋಡುತ್ತಿರಬೇಕು. ಮಗುವಿನ ಆ ನಿಷ್ಕಾಪಟ್ಯ, ಸರಳಸ್ವಭಾವವು ಮಾಯವಾಗುತ್ತಾ ವಯಸ್ಕರ ಚಿತ್ರ ರಚನೆಯ ದಿಶೆಗೆ ಕಾಲಿಡುವಾಗ ಅಧ್ಯಾಪಕರ ಮಾರ್ಗದರ್ಶನದ ಆವಶ್ಯಕತೆಯು ಜಾಸ್ತಿಯಾಗುತ್ತದೆ.

ಒಂದು ತರಗತಿಯಲ್ಲಿ ವಿವಿಧ ದಕ್ಷತೆಗಳುಳ್ಳ ಮಕ್ಕಳಿರುತ್ತಾರೆ. ಆದ್ದರಿಂದ ಅವರೆಲ್ಲರ ಕೃತಿಗಳು ಒಂದೇ ಅಂತಸ್ತಿನದ್ದು ಆಗಲಾರವು. ಆದರೂ ಅವುಗಳಲ್ಲಿ ಮೇಲು ಕೀಳು ವರ್ಗಮಾಡಿ

ಹೇಳದೆ ಅಧ್ಯಾಪಕರು ಆ ಎಲ್ಲಾ ಕೃತಿಗಳನ್ನೂ ಶ್ಲಾಘಿಸಬೇಕು. ಕೃತಿಗಳಲ್ಲಿ ತಾರತಮ್ಯ ತೋರಿದರೂ ಆ ಕೃತಿಗಳ ರಚನೆ ಬಗ್ಗೆ ಅವರೆಲ್ಲರ ಶ್ರದ್ಧೆ, ಪ್ರಾಮಾಣಿಕತೆಗಳಲ್ಲಿ ಅಂತರಗಳಿಲ್ಲವಷ್ಟೆ! ನಿಷ್ಠೆಯಿಂದ ಯಥಾಶಕ್ತಿ ರಚಿಸಿದರಾಯಿತು. ಅಧ್ಯಾಪಕರು ಮಕ್ಕಳ ಚಿತ್ರ ವಿಚಿತ್ರ ಕಲ್ಪನೆಗಳನ್ನು ಹುರಿದುಂಬಿಸಿ ಹೊರ ಹೊಮ್ಮಿಸಿ ರಚನೆ ಮಾಡಿಸುವ ಜೊತೆಗಾರರು. "Free Expression without adult imposition" 'ವಯಸ್ಕರ ವಿಧಿಸುವಿಕೆ ಇಲ್ಲದೆ ಭಾವಪ್ರಕಾಶನ' ಎಂಬುದು ಶಿಶುಚಿತ್ರಕಲಾ ಶಿಕ್ಷಣದ ಮೂಲಸೂತ್ರ. ಸಾಮಾನ್ಯ ಒಂಬತ್ತು ವರುಷಕ್ಕಿಂತ ಕಡಮೆ ವಯಸ್ಸಿನ ಮಗುವಿನೊಡನೆ ಇದಿರುತೋರುವ ವಸ್ತುವಿನ ಅಥವಾ ಅಂತಹುದೇ ಚಿತ್ರಪ್ರತಿ ತೆಗೆಯಲು ಹೇಳಿದರೆ ಅದು ಆ ಕಾರ್ಯದಲ್ಲಿ ಬೇಗನೆ ಬೇಸರಪಡುತ್ತದೆ. ಅದೇ ಮಗುವು ಕಲ್ಪನಾಚಿತ್ರ ನಿರ್ಮಾಣದಲ್ಲಿ ತಲ್ಲೀನವಾಗಿ ಹೆಚ್ಚು ಹೊತ್ತು ಕೃತಿರಚಿಸುತ್ತದೆ. ಆ ಕಲ್ಪನೆಯು ಮಗುವಿಗೆ ತನ್ನ ನಿಗೂಢ ಪ್ರಜ್ಞೆಯಿಂದ [subconscious] ಉಂಟಾಗುತ್ತದೆ. ಆದುದರಿಂದ ಅದರ ಯೋಚನೆಗಳನ್ನು ಚಿತ್ರರಚನೆಯಿಂದ ಪ್ರಕಾಶಪಡಿಸಲು ಉದ್ವೇಗಯುಕ್ತವಾಗುವಂತೆ ಮಾಡಬೇಕು. ಆ ಬಗ್ಗೆ ಪ್ರತಿಯೊಬ್ಬ ವಿದ್ಯಾರ್ಥಿಯೊಡನೆ ಅಲ್ಲಿ ಸಂದರ್ಭೋಚಿತ ಮಾರ್ಗದರ್ಶನ ಅರಿತು ವರ್ತಿಸಬೇಕು.

ಒಂದು ತರಗತಿಯಲ್ಲಿ ಒಬ್ಬ ಚಿಕ್ಕ ತುಂಟ ಹುಡುಗನಿದ್ದನು. ಕಲಾತರಗತಿಯಲ್ಲಿ ಕಾಗದದ ಮೇಲೆ ಕುಂಚದಿಂದ ಇಚ್ಛಾನುಸಾರ ಬಣ್ಣಗಳನ್ನು ತಟ್ಟುತ್ತಿರುವುದು ಅವನ ಚೇಷ್ಟೆಯಾಗಿತ್ತು. ಅಧ್ಯಾಪಕರು ಅವನ ಹತ್ತಿರ ಹೋದರು. 'ಚಿತ್ರ ಚಲೋದಾಗುತ್ತದೆ' ಎಂಬುದಾಗಿ ಪ್ರಶಂಸಿಸಿದರು. ಚೇಷ್ಟೆಗಾಗಿ ಬಣ್ಣತಟ್ಟಿ ಹಾಕಿದರೂ ಅಂತಹ ವರ್ಣವಿನ್ಯಾಸದಲ್ಲೂ ಒಂದು ವಿಶಿಷ್ಟವಾದ

ಸೌಂದರ್ಯವಿರುತ್ತದೆ. ಅಧ್ಯಾಪಕರು ಆತನಿಗೆ ಆ ಗುಣಗಳನ್ನು ಹೆಕ್ಕಿ ಹೇಳಿದರು. ಆ ಮಾತನ್ನು ಕೇಳಿ ಆ ತುಂಟನು ತನ್ನ ಕಿವಿಗಳನ್ನೇ ನಂಬಲಿಲ್ಲ. "ಬಣ್ಣ ಹಾಳುಮಾಡುತ್ತಿದ್ದಾನೆಂದು" ಬೋಧಕರಿಂದ ಬೈಗುಳನ್ನು ನಿರೀಕ್ಷಿಸಿದ್ದನು. ಕಲಾಭ್ಯಾಸದಲ್ಲಿ ತನ್ನದೇ ಆದ ನೂತನ ಶೈಲಿಯೊಂದನ್ನು ನಿರ್ಮಿಸಲು ಪ್ರಯೋಗ ಮಾಡುವವನು ಬಣ್ಣಗಳನ್ನು ಹಾಳುಮಾಡುವವನಾಗುವುದಿಲ್ಲ. ಆ ಕಲಾಶಿಕ್ಷಕರ ವರ್ತನೆಯು ಆ ಬಾಲಕನ ಗುಣದ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿತು. ಆತನು ಸಭ್ಯನಾದನು; ಉತ್ತಮ ಚಿತ್ರಗಾರನಾದನು. ಕಲಾಪಾಠವು ಈ ಪ್ರಕಾರ ಶೀಲನಿರ್ಮಾಣ ಮಾಡಿದ ಅನೇಕ ನಿದರ್ಶನಗಳಿವೆ.

ಕಲೆಯು ಒಂದು ಪ್ರತ್ಯೇಕವಾದ ಪಾಠ ಎಂಬ ಭಾವನೆ ಬರಬಾರದು. ಇತರ ಎಲ್ಲಾ ಪಾಠ ಹಾಗೂ ಚಟುವಟಿಕೆಗಳಲ್ಲಿ ಕಲೆಯನ್ನು ಒಂದು ಮಾಧ್ಯಮವನ್ನಾಗಿ, ಪೂರಕವಾಗಿ ಬಳಸಬೇಕು. ನಾಗರಿಕತೆಯ ಬೆಳವಣಿಗೆಯಲ್ಲಿ ಬಾಳನ್ನು ಸುಂದರ ಹಾಗೂ ಸಂಪನ್ನವಾಗಿ ಮಾಡುವ ಕಲೆಯ ಪಾತ್ರವನ್ನು ಅರಿತಿರಬೇಕು. ಕಲಾತ್ಮಕ ವಸ್ತು ನಿರ್ಮಾಣ, ಕಲೆಯನ್ನು ಮೆಚ್ಚಿ ಸಂತೋಷ ಪಡುವ ಹೃದಯ ಮತ್ತು ಕಲೆಯ ಭಾಷೆಯನ್ನು ಅರಿಯುವುದು ಸಮಸ್ತ ನಾಗರಿಕರಿಗೂ ಅಗತ್ಯವಾದ ಜ್ಞಾನವಾಗಿದೆ. ಒಂದು ಸಂಸ್ಥೆಯ ಬಾಹ್ಯ, ಅಂತರರೂಪಗಳು, ವಸ್ತುಗಳನ್ನು ಇಡುವಿಕೆ, ಉಡುಗೆ ತೊಡುಗೆ, ಆಟ ಪಾಠ ಎಲ್ಲದರಲ್ಲಿಯೂ ಕಲಾದೃಷ್ಟಿಯು ಕಂಡುಬರಬೇಕು. ಕಲಾಕೃತಿ ಸಂಗ್ರಹ, ಕಲಾಪ್ರದರ್ಶನಗಳ ಏರ್ಪಾಡು ಮೊದಲಾದ ಚಟುವಟಿಕೆಗಳಿಗಾಗಿ ವಿದ್ಯಾರ್ಥಿಗಳಲ್ಲಿ ಆಸಕ್ತಿ ಉಂಟಾಗಬೇಕು. ಕಲಾಪಾಠವು ಚೆನ್ನಾಗಿ ನಡೆಯಲು ಕಲಾಶಿಕ್ಷಕರ ಆಸಕ್ತಿ ಮಾತ್ರವಲ್ಲ, ಇತರ ಅಧ್ಯಾಪಕರು ಆಡಳಿತದ

ವರ ಎಲ್ಲರ ಸಹೃದಯತೆಯು ಅಗತ್ಯವಾಗಿದೆ. ಎಲ್ಲರಲ್ಲೂ ಈ ಬಗ್ಗೆ ಆಸಕ್ತಿಬೇಕು. ಅವರಲ್ಲಿ ಕಲೆಯು ಒಂದು ಪ್ರತ್ಯೇಕ ವೃತ್ತಿಯವರದ್ದು, ನಮ್ಮದು ಪರೀಕ್ಷಾಪಾಠ. ಕಲೆಯು ಪರೀಕ್ಷಾ ಪಾಠವಲ್ಲ, ನಮಗೆ ಚಿತ್ರಮಾಡಲು ಬರುವುದಿಲ್ಲ. ನಮಗೂ ಅದಕ್ಕೂ ಏನೂ ಸಂಬಂಧವಿಲ್ಲ, ' ಎಂಬ ಭಾವನೆ ಬಾರದು. ಕಲೆಯು ವ್ಯಕ್ತಿಗೂ, ಸಂಸ್ಥೆಗೂ, ಸಮಾಜಕ್ಕೂ, ರಾಷ್ಟ್ರಕ್ಕೂ, ಎಲ್ಲಾ ಪಾಠ ಗಳ ಬೋಧನೆಗೂ ಬೇಕಾದುದು ಎಂದು ಹೃದಯವುಳ್ಳವರಾಗಿ ತತ್ಕಾರ್ಯವನ್ನು ಗೌರವಿಸುವವರು, ಸಹಕಾರಿಗಳೂ ಆಗಿರಬೇಕು.

ತತ್ಸಂಬಂಧವಾಗಿ ಶಾಲಾಪಾಠಪಟ್ಟಿಯಲ್ಲಿ ಹೀಗೆ ಸಲಹೆಗಳಿವೆ. "ನಿರ್ದಿಷ್ಟವಾದ ಕಲಾಶಿಕ್ಷಣಕ್ಕೆ ನಿಗದಿಯಾದ ಅವಧಿಯಲ್ಲಿಷ್ಟೇ ಅಲ್ಲದೆ ಪಾಠಕ್ರಮವು ಮಗುವು ಭಾಗವಹಿಸುವ ಚಟುವಟಿಕೆ ಗಳುಳ್ಳ ಪ್ರತಿ ಅವಧಿಯಲ್ಲಿಯೂ, ಪ್ರತಿ ತರಗತಿಯಲ್ಲಿಯೂ ಸಮ ವಾಯಗೊಳ್ಳಬೇಕು. ಎಲ್ಲಾ ಶಿಕ್ಷಕರೂ ವಿವಿಧ ಮಾರ್ಗದಲ್ಲಿ ವಿವಿಧ ಕ್ರಮದಲ್ಲಿ ಕಲಾಪಾಠದ ಬೋಧಕರು ಕಲಾಶಿಕ್ಷಕರು. ಯಾವಪಾಠದ ಕುರಿತು ಕೂಡ ಮಾತುಗಳನ್ನಾಡಿ ಪ್ರೇರಿಸಿ ಕಲಾ ರಚನೆ ಮಾಡಿಸಬಹುದು. ಮಗುವಿನಲ್ಲಿ ಸುಪ್ತವಾದ ಸೃಜನ ಪ್ರವೃತ್ತಿಗಳನ್ನು, ಚತುರ ಮಾರ್ಗದರ್ಶನ ಪ್ರೇರಣೆಗಳಿಂದ ಹೊರ ಸೆಳೆಯಬೇಕು."

ಮಗುವು ಭಾವನೆಗಳನ್ನು ಗುರುತುಗಳಿಂದ ತಿಳಿಯಪಡಿಸುವಾಗ ವಿಷಯ ಬಾಹುಳ್ಯವಿದ್ದರೂ ಅಷ್ಟನ್ನು ಸೂಚಿಸಲು ಚಿತ್ರದಲ್ಲಿ ಕೆಲವೇ ಗುರುತುಗಳನ್ನು ಉಪಯೋಗಿಸುತ್ತದೆ. ಹೋಲಿಕೆಯ ಅಭಾವ ಇರುವ ಕಾರಣ ಮೊದಮೊದಲು ಮಗುವಿನ ಭಾವನೆಗಳನ್ನು ಆ ಗುರುತುಗಳಿಂದ ತಿಳಿಯಲು ನಮಗೆ ಕಷ್ಟವಾಗುತ್ತದೆ. ಅಲ್ಲದೆ ಕೆಲವೊಮ್ಮೆ ನಾವು ಸಂಭಾಷಣೆ ಮಾಡಿ ಪ್ರೇರಿಸಿದ ವಿಷಯವನ್ನು

ಚಿತ್ರದಿಂದ ಹೇಳದೆ ಬೇರೊಂದು ವಿಚಾರವನ್ನು ಚಿತ್ರಿಸುವುದುಂಟು. ಪತಂಗವು ಹೂವಿಂದ ಹೂವಿಗೆ ಹಾರಾಡುವಂತೆ ಶಿಶುಗಳ ಮನಸ್ಸು ಚಂಚಲವಾದುವು. ಮಾತುಕತೆಯಾಡಿದುದನ್ನೇ ಚಿತ್ರಿಸದೆ ಅವರ ನಿಗೂಢ ಪ್ರಜ್ಞೆಯ [Subconcious] ದೆಸೆಯಿಂದ ಮತ್ತೊಂದನ್ನು ಚಿತ್ರಿಸಿದರೂ ಆಕ್ಷೇಪಕರವಲ್ಲ.

ಶಿಶುಚಿತ್ರ ಕಲಾಪಿತನೆನಿಸಿಕೊಂಡ ಸಿಜೆಕನು ಮಕ್ಕಳೊಡನೆ ಸಂಭಾಷಣೆ ಮಾಡುವುದು, ಮಕ್ಕಳಿಗೆ ಕಥೆ ಹೇಳುವುದು, ಚಿತ್ರಣಕ್ಕೆ ವಿಷಯ ಪ್ರೇರಿಸುವುದು ಹೀಗೆ ಪಾಠವನ್ನು ಆರಂಭಿಸುತ್ತಿದ್ದನು. ಕೆಲವು ನಿಮಿಷ ಕಳೆದನಂತರ ಕಲಾತರಗತಿಯಲ್ಲಿ ಪ್ರತಿ ಮಗುವಿನ ಬಳಿಗೂ ಹೋಗಿ ಪ್ರತಿಯೊಂದು ಚಿತ್ರಕೃತಿಯನ್ನೂ ನೋಡಿ ಮೆಚ್ಚುಗೆಯನ್ನು ವ್ಯಕ್ತಪಡಿಸುವುದು ಅವನ ರೂಢಿ. ಹಾಗೆಯೇ ಒಂದು ದಿನ ಕಲಾತರಗತಿಯಲ್ಲಿ ಸುತ್ತಾಡಿ ಎಲ್ಲರ ಚಿತ್ರಗಳನ್ನೂ ನೋಡಿ ಉತ್ಸಾಹ ಹೆಚ್ಚಿಸಿದನು. ಸ್ವಲ್ಪ ಹೊತ್ತಿನಲ್ಲಿ ಒಬ್ಬ ಚಿಕ್ಕ ಹುಡುಗಿಯು ಅಳುತ್ತಿದ್ದುದು ಆತನಿಗೆ ತೋರಿತು. ಕೂಡಲೇ ಆಕೆಯ ಬಳಿಗೆ ಹೋಗಿ ಅಳುವಿನ ಕಾರಣವನ್ನು ವಿಚಾರಿಸಿದನು. ಸಿಜೆಕನು ಆಕೆಯ ಚಿತ್ರವನ್ನು ನೋಡದೆ ಹೋಗಿದ್ದನಂತೆ. ಅದೇ ಅವಳ ದುಃಖಕ್ಕೆ ಕಾರಣವಾಗಿತ್ತು. ಸಿಜೆಕನು ತರಗತಿಯಲ್ಲಿ ತಿರುಗಾಡಿ ಎಲ್ಲಾ ಮಕ್ಕಳ ಚಿತ್ರಗಳನ್ನು ನೋಡಿ, ಕೊಂಡಾಡಿ ಹೋದಾಗ ಆಕೆಯು ಅಲ್ಲಿ ಇರಲಿಲ್ಲ; ಹೊರಗೆ ಹೋಗಿದ್ದಳು. ಮಕ್ಕಳೆಲ್ಲರೂ ಶಿಕ್ಷಕನಿಂದ ಪ್ರೇಮ, ಭರವಸೆ, ಮೆಚ್ಚುಗೆಗಳನ್ನು ಬಯಸುತ್ತಾರೆ. ಹಾಗೆ ಎಲ್ಲಾ ಮಕ್ಕಳಿಗೂ ವಾತ್ಸಲ್ಯ, ಮೆಚ್ಚುಗೆಗಳನ್ನು ನೀಡುವುದು ಕಲಾಶಿಕ್ಷಕನ ಕರ್ತವ್ಯ. ಕೆಲವು ಮಕ್ಕಳಲ್ಲಿ ತಾವು ಏನನ್ನು ಹೇಳಬೇಕೆಂಬ ವಿಷಯ ಸ್ಪಷ್ಟತೆಯು ಇರುತ್ತದೆ; ಕೆಲವರಲ್ಲಿ ಹಾಗೆ ಇರುವುದಿಲ್ಲ. ಅಂತಹ ಅನಿಶ್ಚಿತತೆ ಇರುವ

ಮಕ್ಕಳ ಕಡೆಗೆ ಇತರರಿಗಿಂತ ಆ ಬಗ್ಗೆ ಹೆಚ್ಚಿನ ಗಮನವನ್ನು ಕೊಡಬೇಕಾಗುತ್ತದೆ. ಅವರ ಕಲಾರಚನೆಯು ಅಮೂಲ್ಯವಾದುದು ಎಂಬ ಅರಿವನ್ನುಂಟುಮಾಡಿ ಅವರಲ್ಲಿರುವ ಉತ್ತಮ ಗುಣವನ್ನು ಪ್ರಕಾಶಗೊಳಿಸಬೇಕಾಗುತ್ತದೆ.

ಎಲ್ಲಾ ಪಾಠಗಳಲ್ಲೂ ಮಕ್ಕಳ ಯೋಗ್ಯತೆಗಳನ್ನು ಅಳೆದು ಹೇಳಲು ಗುಣಗಳನ್ನು [Marks] ಕೊಡುವುದು ರೂಢಿಯಾಗಿದೆ. ಆದರೆ ಚಿಕ್ಕಮಕ್ಕಳ ಚಿತ್ರಗಳ ಆಕಾರ ಮತ್ತು ನಮೂದಿಸಿದ ವಿಷಯಗಳನ್ನು ನೋಡಿ ಒಬ್ಬನದ್ದು ಮೇಲು ಇನ್ನೊಬ್ಬನದ್ದು ಕೀಳು ಎಂದು ಹೋಲಿಸಿ ಹೇಳುವುದು ತರವಲ್ಲ. ಇಲ್ಲಿ ಆ ಬಗ್ಗೆ ಕೃತಿರೂಪ ಮತ್ತು ವಿಷಯಗಳು ಮಾನದಂಡವಲ್ಲ. ಮಗುವು ಕೃತಿ ರಚನೆಯಲ್ಲಿ ಆಸಕ್ತಿಹೊಂದಿ ಕೆಲಸ ಮಾಡಿದ್ದರೆ ಪಾಠವು ಸಫಲವಾಯಿತು. ಹಾಗೆ ಕೆಲಸದಲ್ಲಿ ತಲ್ಲೀನತೆಯೇ ಈ ಪಾಠದ ಸಾಫಲ್ಯದ ಮಾನದಂಡವಾಗಿದೆ. ಆದಕಾರಣ ಕೃತಿರಚನೆಗಳಿಗಾಗಿ ಬಹುಮಾನ ನೀಡುವಿಕೆಯು ಕೂಡ ಯುಕ್ತವಲ್ಲ ಎಂದು ಕೆಲವರ ಭಾವನೆ. ಅದರಿಂದ ಬಹುಮಾನಿತ ಬಾಲಕನು ತಾನು ಚಿತ್ರರಚನೆಯಲ್ಲಿ ಬಹು ಬುದ್ಧಿವಂತನೆಂದು ಮಿತಿಮೀರಿ ಭಾವನೆ ಪಡಬಹುದು. ಇತರರು ತಾವು ಹೆಡ್ಡರು ಎಂಬುದಾಗಿ ನಿಕೃಷ್ಟತಾ ಭಾವನೆ ತಾಳಿ ಆತ್ಮವಿಶ್ವಾಸ ಕಳೆದುಕೊಳ್ಳಬಹುದು. ಆ ಬಹುಮಾನಿತರು ತಮಗಿಂತ ಜಾಣನೆಂಬ ಭಾವನೆಯಿಂದ ಆತನೊಡನೆ ಇತರರು ತಮಗಾಗಿ ಚಿತ್ರಿಸಿಕೊಡಲು ಕೇಳುತ್ತಾರೆ. ಅವರೊಳಗೆ ಆ ತಾರತಮ್ಯಬುದ್ಧಿ ಉಂಟಾಗುವುದಾಗಲೀ, ಇತರ ಮಕ್ಕಳು ತಾವು ನಿಕೃಷ್ಟರೆಂದು ಉದಾಸೀನತೆ ಹೊಂದುವುದಾಗಲೀ ಹಿತಕರವಲ್ಲ. ಹೀಗೆ ಕೆಲವರ ಅಭಿಪ್ರಾಯ. ಮಾರ್ಕುಗಳನ್ನೂ, ಬಹುಮಾನಗಳನ್ನೂ ಕೊಡುವುದು ಒಳ್ಳೆಯದು ಎಂದು ಅಭಿಪ್ರಾಯ ಪಡುವ

ವಿಚಾರವಂತರೂ ಕೆಲವರಿದ್ದಾರೆ. ದೊಡ್ಡಮಕ್ಕಳ ಚಿತ್ರಗಳಿಗೆ ಮಾತ್ರ ಹಾಗೆ ಮಾಡಬಹುದೆಂದು ಹೆಚ್ಚಿನವರ ಮತ. ಅದರಲ್ಲಿ ಕೂಡ ಶ್ರೀಪ್ರುಗಾರರಾಗಿ ಮಕ್ಕಳದ್ದೇ ಒಂದು ಸಮಿತಿಯನ್ನು ಮಾಡಿ ಆ ಹೊಣೆಯನ್ನು ಅವರಿಗೇ ಒಪ್ಪಿಸಿಬಿಡಬೇಕು ಎನ್ನುವವರೂ ಇದ್ದಾರೆ.

ಕಾಲ ಕಳೆದಂತೆ ಬಾಲಕ ಬೋಧಕರೊಡನೆ ಭಾವನಾಸಾಹಚರ್ಯ, ಸಹಾನುಭೂತಿಗಳು ಹೆಚ್ಚುವುವು. ಹೊಸಮಕ್ಕಳಿಂದ ರಚನೆ ಮಾಡಿಸುವುದಕ್ಕಿಂತ ಸ್ವಲ್ಪಕಾಲ ಹಿಂದಿನಿಂದ ಬಳಕೆಯಾದ ಮಕ್ಕಳಿಂದ ಉತ್ತಮ ಕೆಲಸ ಮಾಡಿಸಲಾಗುವುದು. ದೊಡ್ಡವರಾದಂತೆ ಮಕ್ಕಳಲ್ಲಿ ಆ ನಿರ್ಮಾಣಗುಣವು ಕಡಮೆಯಾಗುವುದು. ಹಾಗೆ ಸೃಜನಾತ್ಮಕ ಪ್ರೇರಣೆಯು ಕುಂದದೆ ಸಾಧ್ಯವಾದಷ್ಟು ಮುಂದುವರಿಯುವಂತೆ ನೋಡಿಕೊಳ್ಳುವುದು ಶಿಕ್ಷಕರ ಕರ್ತವ್ಯ. ಶಿಕ್ಷಕನು ತನ್ನ ಪ್ರಭಾವವನ್ನು ಬೀರಿ ಯಾಂತ್ರಿಕವಾದ ಕೆಲಸ ಮಾಡಿಸದೆ ಮಕ್ಕಳಲ್ಲಿ ಆತ್ಮವಿಶ್ವಾಸವನ್ನುಂಟುಮಾಡಿ ಅದನ್ನು ವರ್ಧಿಸಿ ಅವರದ್ದೇ ಆದ ಕಲ್ಪನಾ ಕೃತಿಗಳನ್ನು ಮಾಡಿಸಬೇಕು. ಆ ವಿಧಾನವು ಶ್ರೇಯಸ್ಕರವೆಂದು ಈಗ ಎಲ್ಲರೂ ಮನಗಂಡಿದ್ದಾರೆ. ಇದು ಆಧುನಿಕ ಮನೋಭಾವವಾಗಿದೆ.

## ಮಕ್ಕಳ ಚಿತ್ರಕಲಾಶಿಕ್ಷಕ

(ಸಾಮಾನ್ಯ ಐದನೆಯ ದರ್ಜೆಯ ನಂತರದ ಮಕ್ಕಳಿಗಾಗಿ)

ದೊಡ್ಡವರಾದಂತೆ ಎಲ್ಲಾ ಮಕ್ಕಳು ಚಿತ್ರರಚನೆಯಲ್ಲಿ ಏಕಪ್ರಕಾರ ನಿಪುಣರಾಗಿ ಇರುವುದಿಲ್ಲ. ಸಾಮಾನ್ಯವಾಗಿ ಪ್ರತಿ ಹತ್ತರಲ್ಲಿ ಇಬ್ಬರು ಮೂವರು ಉತ್ತಮವಾಗಿ ಚಿತ್ರಿಸಬಹುದು. ಇತರರು ಅಷ್ಟು ಚೆನ್ನಾಗಿ ಮಾಡಲಾರರು. ಮೊದಲನೆಯವರನ್ನು "ಅ" ವಿಭಾಗದವರೆಂದರೆ ಎರಡನೆಯವರನ್ನು "ಬ" ವಿಭಾಗದವರೆನ್ನ

ಬಹುದು. ಕೆಲವೊಮ್ಮೆ "ಅ" ವಿಭಾಗದ ಕೆಲವರು ರೇಖಾ ವಿನ್ಯಾಸದಲ್ಲಿ ಚತುರರಾಗಿದ್ದು ವರ್ಣವೈಖರಿಯಲ್ಲಿ ಹಾಗೆ ಇಲ್ಲದಿರ ಬಹುದು. "ಬ" ವಿಭಾಗದ ಕೆಲವರು ಆಕೃತಿ ರಚನೆಗಳಲ್ಲಿ ಸಾಮಾನ್ಯರಾಗಿದ್ದು ವರ್ಣವಿನ್ಯಾಸದಲ್ಲಿ "ಅ" ವಿಭಾಗದವರನ್ನು ಮೀರಿಸಬಹುದು. ಅವರೆಲ್ಲರನ್ನೂ ಒಂದೇತೆರನಾಗಿ ನೋಡಲಾಗದು. ಮುಂದುವರಿದ ಕೆಲವು ದೇಶಗಳಲ್ಲಿ ಕಲಾಪಾಠಕ್ಕಾಗಿ ಅವರ ವಯಸ್ಸು—ವ—ಶಾಲಾತರಗತಿಯನ್ನು ಲಕ್ಷಿಸದೆ ಕಲಾರಚನೆಯಲ್ಲಿ ಅವರಲ್ಲಿ ಕಂಡುಬಂದ ಪ್ರತಿಭೆಗನುಗುಣವಾಗಿ 'ಅ' 'ಬ' 'ತ' 'ಡ' ವರ್ಗಗಳಾಗಿ ಮಾಡಿಕೊಂಡು ಕಲಾಶಿಕ್ಷಣ ಕೊಡು ತ್ತಾರೆ. ಎಂದರೆ ಆ ಮಕ್ಕಳಿಗೆ ಶಾಲಾತರಗತಿ ಒಂದು, ಕಲಾತರ ಗತಿ ಮತ್ತೊಂದು ಆಗುವುದುಂಟು. ಒಬ್ಬನು ಶಾಲೆಯಲ್ಲಿ ೫ನೇ ತರಗತಿಯವನಾದರೆ ಕಲಾಶಿಕ್ಷಣದಲ್ಲಿ ೪ನೇ ಅಥವಾ ೬ನೇ ತರಗತಿ ಯವನು ಆಗಬಹುದು. ನಮ್ಮಲ್ಲಿ ಶಾಲಾತರಗತಿ ಪ್ರಕಾರವೇ ಕಲಿಸುವ ರೂಢಿ. ಹಾಗಾಗಿ ಒಂದೇ ದರ್ಜೆಯಲ್ಲಿ 'ಅ' 'ಬ' 'ತ' 'ಡ' ಎಲ್ಲಾ ವಿಭಾಗದವರೂ ಇರುತ್ತಾರೆ. ಅವರಲ್ಲಿ 'ಅ' ವಿಭಾಗದ ವಿದ್ಯಾರ್ಥಿಯನ್ನು ಪ್ರಶಂಸಿಸಿ ಉತ್ತೇಜನ ಕೊಡುವಾಗ 'ಬ' ವಿಭಾಗದವನನ್ನು ಅವನೊಡನೆ ಹೋಲಿಸಿ ಅಪ್ರಯೋಜಕ ನೆಂದು ನಿಂದಿಸಿ ಆತನ ಧೈರ್ಯಗೆಡಿಸಿ ನಿರುತ್ಸಾಹಗೊಳಿಸಬಾರದು. ಎಲ್ಲಾ ಅಂತಸ್ತಿನ ವಿದ್ಯಾರ್ಥಿಗಳ ಕೃತಿಗಳನ್ನೂ ಸಹಾನುಭೂತಿ ಯಿಂದ ಪರಿಶೀಲಿಸಬೇಕು. 'ಅ' ವಿಭಾಗದವನು ರೂಪರಚನಾ ಕ್ರಮ, ಪರ್ಸ್ಪೆಕ್ಟಿವ್ ಕಲಾತಂತ್ರ ಮೊದಲಾದವುಗಳನ್ನು ಕಲಿಯಲು ತಾನಾಗಿ ಬಯಸುತ್ತಾನೆ. ಮಕ್ಕಳು ಚಿತ್ರದಲ್ಲಿ ತಪ್ಪೊಪ್ಪನ್ನು ಅಪೇಕ್ಷಿಸಿ ತಿದ್ದಿಕೊಡಲು ಕೇಳಿದಾಗ ಆ ತಿದ್ದುವಿಕೆಯನ್ನು ಅವರ ಚಿತ್ರಗಳಮೇಲೆ ಮಾಡಬಾರದು. ಅವರ ಮೌಲಿಕಗುಣ ಹಾಗೂ

ರಚನಾಶೀಲಗಳಿಗೆ ಧಕ್ಕೆ ತಗುಲದಂತೆ ಅವರ ಚಿತ್ರವನ್ನು ಕಾಗದದ ಮೇಲೆ ಬೇರೆ ಒಂದು ಕಡೆ ಚಿತ್ರಿಸಿ ತೋರಿಸಬೇಕು. ಆ ತಿದ್ದು ವಿಕೆಯು ಹೆಚ್ಚು ಮಕ್ಕಳಿಗೆ ಬೇಕಾದುದಾದರೆ ಕರಿಹಲಗೆಯಮೇಲೆ ಚಿತ್ರಿಸಿ ಎಲ್ಲರಿಗೂ ಅಗತ್ಯವಾದ ಆ ಅನುಭವವನ್ನು ಒಮ್ಮೆಗೇ ಕೊಡತಕ್ಕದ್ದು. ' ಅ ' ವಿಭಾಗದವರೊಡನೆ ಅವರ ಯೋಗ್ಯತಾನು ಸಾರ ಬಣ್ಣಗಳ ಹೊಂದಿಕೆ, ಚಿತ್ರರಚನಾಕ್ರಮ, ಪರಸ್ಪರಪ್ರಮಾಣ ಮೊದಲಾದವುಗಳನ್ನು ಚರ್ಚಿಸಬಹುದು. ಅವರ ಚಿತ್ರಗಳಮೇಲೆ ಅಧ್ಯಾಪಕರು ಏನನ್ನೂ ಮಾಡದೆ ಮೌನವಾಗಿಯೇ ಕುಳಿತರೆ ಆ ಮಕ್ಕಳು ಪ್ರಯತ್ನ ಮಾಡುವುದನ್ನು ಬಿಟ್ಟು ಉತ್ಸಾಹಹೀನ ರಾಗುವ ಸಂಭವವಿದೆ. ಹಾಗೆ ಆಗದಂತೆ ನೋಡಿಕೊಳ್ಳಬೇಕು.

ಸಾಮಾನ್ಯ ೫-೬ನೇ ತರಗತಿಗಳಿಗಾಗಿ ಆಕಾರ ವರ್ಣಗಳಲ್ಲಿ ಆಕರ್ಷಕವಾದ ಒಂದೆರಡು ವಸ್ತುಗಳನ್ನು ಆರಿಸಿ ಮಕ್ಕಳ ಮುಂದಿಟ್ಟು ಅವುಗಳ ಚಿತ್ರ ತೆಗೆಯಿಸಬಹುದು. ಆ ಚಿತ್ರಗಳಿಗೆ ಬಣ್ಣ ಹಾಕಿಸಬಹುದು. ಸ್ಥಳೀಯವಾಗಿ ದೊರೆಯುವ ಹಣ್ಣು ಹೂವುಗಳ ವರ್ಣಚಿತ್ರಗಳನ್ನು ಮಾಡಿಸಬಹುದು. ಆದರೂ ಕಲ್ಪನಾ ಚಿತ್ರಗಳ ಸ್ಥಾನವನ್ನು ಚ್ಯುತಿಗೊಳಿಸಬಾರದು. ಪ್ರಕೃತಿ ದೃಶ್ಯ ಗಳನ್ನು ಕೂಡ ಆಯಾ ಸ್ಥಳಗಳಿಗೆ ಹೋಗಿ ನೋಡಿ ಚಿತ್ರಿಸಲು ಮಾರ್ಗದರ್ಶನ ಮಾಡಬಹುದು. ಇಲ್ಲವಾದರೆ ಅವರು ವೃತ್ತ ಪತ್ರಿಕೆಗಳ ದೃಶ್ಯ ಚಿತ್ರಗಳನ್ನು ನಕಲು ತೆಗೆಯುವ ಕೀಳು ಹವ್ಯಾಸಕ್ಕೆ ತೊಡಗಬಹುದು. ಇದು ಹೆಚ್ಚಿನ ಅಪಾಯಕಾರಿ. ಉಪಕರಣಗಳನ್ನು ಬಳಸುವ ಕೌಶಲ, ವಸ್ತುಗಳ ಆಕೃತಿಗಳ ಪರಿಶೀಲನಾಗುಣ, ಕಲೆಯ ಜ್ಞಾನ ಮೊದಲಾದ ಗುಣಗಳು ಅಧ್ಯಾಪಕರ ಮಾರ್ಗದರ್ಶನದಿಂದ ವೃದ್ಧಿಯಾಗುತ್ತವೆ.

ಮಕ್ಕಳು ಚಿತ್ರವನ್ನು ಚಿಕ್ಕದಾಗಿ ರಚಿಸುವುದುಂಟು. ಆಗ

ಅವರೊಡನೆ ಚಿತ್ರವನ್ನು ದೊಡ್ಡದಾಗಿ ಮಾಡಲು ಹೇಳಬೇಕು. ಕೆಲವರ ಚಿತ್ರಗಳಲ್ಲಿ ದೋಷಗಳು ಕಂಡುಬಂದರೆ ಅವರನ್ನು ಆ ಬಗ್ಗೆ ಹೆಚ್ಚು ಹೀಯಾಳಿಸಬಾರದು. ಅವರಿಗೆ ಕಟುವಾಗಿ ಹೇಳಿದರೆ, "ಹಾಗೆ ಮಾಡಬಾರದಂತೆ, ಹೀಗೆ ಮಾಡಬಹುದೋ ? ಕೂಡದೋ ? ನನಗಿದೆಲ್ಲ ತಿಳಿಯುವುದಿಲ್ಲ" ಎಂಬ ಶಂಕೆಗಳುಂಟಾಗಿ ಆತ್ಮವಿಶ್ವಾಸ ಕಡಮೆಯಾಗುತ್ತದೆ. ಹಾಗೆ ಆಗಲು ಅವಕಾಶ ನೀಡಬಾರದು. ಕಲಾಶಿಕ್ಷಣದಲ್ಲಿ ಎಲ್ಲರಿಗೂ ಆತ್ಮವಿಶ್ವಾಸ ಆಸಕ್ತಿ ಹೆಚ್ಚಿಸಿ ಭಾವಪ್ರಕಾಶನ ಮಾಡಿಸಬೇಕು.

ಒಂದು ಮಗುವು ಹೂ ಗಿಡ, ಹಣ್ಣು ತುಂಬಿದ ಹರಿವಾಣ ತುಳಸಿಕಟ್ಟೆ ಅಥವಾ ಆನೆಯ ಚಿತ್ರ ಬರೆಯಬಹುದು. ಆದರೆ ಮತ್ತೊಬ್ಬನಿಗೆ ಅವುಗಳನ್ನು ಚಿತ್ರಿಸಲು ಇಷ್ಟವಾಗದೆ ಮಣ್ಣಿನಿಂದ ಅವೇ ಹಣ್ಣುಗಳನ್ನೂ, ಗೊಂಬೆಗಳನ್ನೂ, ಆನೆಯನ್ನೂ ನಿರ್ಮಿಸಲು ಅಪೇಕ್ಷೆಪಡುವುದುಂಟು. ಇನ್ನೊಬ್ಬಳು ಅದನ್ನೇ ಹೊಲಿದು ರಚಿಸಲು ಆಶಿಸಬಹುದು. ನಾಲ್ಕನೆಯವನು ಆ ಮೂರು ಮಾಧ್ಯಮಗಳನ್ನು ಇಷ್ಟಪಡದೆ ಕಾಗದ ಹರಿದು ಜೋಡಿಸಿ ಹಚ್ಚಿ ಅವುಗಳನ್ನೆ ಮಾಡಲು ಬಯಸಬಹುದು. ಆದುದರಿಂದ ಮಾಧ್ಯಮನಿರ್ಬಂಧಗಳಿಲ್ಲದೆ ಅವರವರ ಒಲವಿಗನುಗುಣವಾಗಿ ರಚನೆಮಾಡಲು ಅವಕಾಶವಿರಬೇಕು. ಆದರೆ ಯಾವುದಾದರೂ ಒಂದು ಕೃತಿರಚನೆ ಮಾಡುವಂತೆ ಪ್ರೇರಣೆಯನ್ನು ಉಂಟುಮಾಡಬೇಕು. ಆ ನಿರ್ಮಾಣ ಕಾರ್ಯಕ್ಕಾಗಿ ಮೂರು ಮೂಲಗುಣಗಳ ಆವಶ್ಯಕತೆ ಇವೆ.

೧. ಪ್ರೇರಿತವಾದ ಭಾವನೆಗಳು. ೨. ಪರಿಶೀಲಿಸುವ ದೃಷ್ಟಿ ೩. ನಿರ್ಮಿಸಲು ಪಳಗಿದ ಕೈ. ಇವುಗಳಲ್ಲಿ ಮೊದಲನೆಯದಕ್ಕಾಗಿ ಕಲಾಶಿಕ್ಷಕನ ಪಾತ್ರ ಮಹತ್ವದ್ದು. ಬಾಕಿ ಎರಡು ಗುಣಗಳು ಹಿಂದಿನಿಂದ ತಾವಾಗಿ ಪ್ರಾಪ್ತವಾಗುತ್ತದೆ.

ಮಕ್ಕಳು ವಯಸ್ಕರ ಚಿತ್ರಕ್ಕೆ ಒಲಿಯುತ್ತಿರುವಾಗ ಎಂದರೆ ಸಾಮಾನ್ಯ ೫ನೆಯ ನಂತರದ ಎಲ್ಲಾ ತರಗತಿಗಳಿಗೂ ಚಿತ್ರ ವಿಷಯಗಳು ಬೇರೆಬೇರೆಯಾಗಿರಬೇಕೆಂಬುದಿಲ್ಲ. ಚಿತ್ರಿಸಲು ಒಂದೇ ವಿಷಯವನ್ನು ಕೊಟ್ಟು ಕೃತಿಯ ಯೋಗ್ಯತೆಯು ಮಾತ್ರ ಆಯಾ ತರಗತಿಗೆ ಅನುಸಾರವಾಗಿ ಇರುವಂತೆ ನಿರೀಕ್ಷಿಸಬಹುದು. ಉದಾ ಹರಣೆಗಾಗಿ ಆಲಂಕಾರಿಕ ನಮೂನಾರಚನೆ, ಸ್ಮೃತಿಚಿತ್ರ, ಅಕ್ಷರ ಚಿತ್ರಣಯಾವುದನ್ನೇ ಆಗಲಿ ಆರನೇ, ಏಳನೇ, ಎಂಟನೇ ತರಗತಿ ಗಳಿಗೆ ಒಂದೇ ಚಿತ್ರವನ್ನು ಚಿತ್ರಿಸಲು ನಿರ್ದೇಶಿಸಬಹುದು. ಆದರೆ ಕೆಳತರಗತಿಯವರಿಗಿಂತ ಮೇಲಿನ ತರಗತಿಯವರಿಂದ ಹೆಚ್ಚು ಯೋಗ್ಯತೆಯ ರಚನೆಗಳಾಗುವಂತೆ ನೋಡಿಕೊಳ್ಳಬೇಕು. ಇದು ಒಳ್ಳೆಯ ಕ್ರಮವೆಂದು ಹಲವರು ಅಭಿಪ್ರಾಯಪಟ್ಟಿದ್ದಾರೆ.

ಮಕ್ಕಳು ತಮ್ಮ ಕಲ್ಪನೆಯನ್ನು ಬಿಡುಗೈಯಿಂದಲೇ ರಚಿಸ ಬೇಕು. ಆ ಬಗ್ಗೆ ಅಡಿಗೋಲು, ಕೈವಾರ ಮೊದಲಾದ ಉಪ ಕರಣಗಳನ್ನು ಉಪಯೋಗಿಸಬಾರದು. ಮನೆ, ಮರ, ಮಾರ್ಗ ಮೊದಲಾದುವುಗಳನ್ನು ಚಿತ್ರಿಸಲು ನೇರಗೆರೆಗಳಿಗಾಗಿ ಉಪಕರಣ ಗಳನ್ನು ಉಪಯೋಗಿಸಲು ಅಪೇಕ್ಷಿಸಬಹುದು. ಅಡಿ ಗೋಲನ್ನೋ, ವೃತ್ತಗಳಿಗಾಗಿ ಕೈ ಬಳೆಗಳನ್ನೋ ಇಟ್ಟು ರೇಖೆ ಎಳೆಯುವಾಗ ಆ ಚಿತ್ರದ ಮಿಕ್ಕಭಾಗಗಳಿಗೆ ಅನುಗುಣವಾಗಿ ಗಾತ್ರ ನಿರ್ಣಯಿಸಲು ಇವರಿಂದ ಸಾಧ್ಯವಾಗುವುದಿಲ್ಲ. ಅಲ್ಲದೆ ಉಪಕರಣಗಳನ್ನು ಉಪಯೋಗಿಸಿ ಎಳೆದ ನೇರ ಅಥವಾ ವಕ್ರ ರೇಖೆಗಳು ಬಿಡುಗೈಯಿಂದ ರಚಿಸಿದ ಮಿಕ್ಕಭಾಗಗಳೊಡನೆ ಹೊಂದಿಕೆಯಾಗುವುದಿಲ್ಲ. ಕೆಲವು ಮಕ್ಕಳು ಪ್ರಧಾನ ವಿಷಯ ವನ್ನು ಅಥವಾ ಒಂದು ಚಿತ್ರವನ್ನೇ ಕಾಗದದ ಒಂದು ಮೂಲೆಯಲ್ಲಿ ರಚಿಸಬಹುದು. ಆಗ ಅದನ್ನು ಸರಿಯಲ್ಲವೆಂದು ತಿಳಿಸಿ ಕಾಗದದ

ಮಧ್ಯೆ ಚಿತ್ರಿಸಲು ಮಾರ್ಗದರ್ಶನ ಮಾಡಿಸಬಹುದು. ಒಂದೇ ಕಡೆ ರಾಶಿಯಾಗಿ ಚಿತ್ರಿಸಿ ಇನ್ನೊಂದು ಕಡೆ ಖಾಲಿ ಉಳಿಸಿರುವಾಗ ಹಾಗೆ ಮಾಡದೆ ಸಮತೋಲನ ಬರುವಂತೆ ಪೂರ್ಣಕಾಗದದ ಮೇಲೆ ಚಿತ್ರಿಸಲು ಹೇಳಬಹುದು. ಕೆಲವರು ಚಿತ್ರಗಳನ್ನು ಬಲು ಚಿಕ್ಕ ದಾಗಿ ರಚಿಸುವುದುಂಟು. ಕೆಲವೊಮ್ಮೆ ಒಂದೇ ವಿಷಯದಮೇಲೆ ನಾಲ್ಕೈದು ಚಿತ್ರಗಳನ್ನು ಒಂದೇ ಕಾಗದದಲ್ಲಿ ಮಾಡುತ್ತಾರೆ. ಆದರಿಂದ ಚಿತ್ರಗಳು ಚಿಕ್ಕದಾಗುತ್ತವೆ. ಆಗ ಪ್ರತಿ ಕಾಗದದ ಮೇಲೂ ದೊಡ್ಡದಾಗಿ ಒಂದೊಂದೇ ಚಿತ್ರಮಾಡುವುದೊಳ್ಳೆಯ ದೆಂದು ಸೂಚಿಸಬಹುದು. ಬಣ್ಣಪೆಟ್ಟಿಗೆಯಲ್ಲಿ ಹಸುರು, ನೇರಳೆ ಮೊದಲಾದ ಮಿಶ್ರಬಣ್ಣಗಳು ಇಲ್ಲವಾದರೆ ಮಕ್ಕಳಿಗೆ ಆ ಬಣ್ಣಗಳು ಬೇಕಾದಾಗ " ಇಂತಹ ವರ್ಣಗಳನ್ನು ಬೆರಕೆಮಾಡಿರಿ, ಆ ಮಿಶ್ರ ಬಣ್ಣ ಸಿಗುವುದು. " ಎಂಬುದನ್ನು ಸೂಚಿಸಬೇಕು.

ವಸ್ತುಚಿತ್ರ, ಪ್ರಕೃತಿಚಿತ್ರ, ಸ್ಮರಣಚಿತ್ರಗಳಲ್ಲದೆ ಅಲಂಕಾರ ನಮೂನೆ [Designs] ಗಳನ್ನೂ ಮಾಡಿಸಬಹುದು. ಕಲ್ಪನಾ ಚಿತ್ರ ರಚನೆಗಾಗಿ ಪ್ರೇರಿಸುವುದಕ್ಕಿಂತ ಇದು ಸುಲಭದ ಕೆಲಸ. ಸಮತೋಲನ [Balance] ದ ಪುನರಾವರ್ತನೆ [Repitltion] ಮೊದಲಾದುವುಗಳು ಸುಂದರ ನಮೂನಾಕೃತಿಯ ತತ್ವಗಳು [Principles of Designs]. ಅಕ್ಷರ, ಎಲೆ, ಸುಳಿವು ಅಥವಾ ಯಾವ ಆಕೃತಿಯನ್ನೇ ಆಗಲಿ ಪುನರಾವರ್ತನೆ ಮಾಡಿ ಚಿತ್ರಿಸುವು ದರಿಂದ ಸುಂದರ ನಮೂನೆಗಳು ನಿರ್ಮಾಣವಾಗುತ್ತವೆ. ಅವರೆ ಕೋಡಿನ ಬೀಜಗಳಸಾಲು, ನವಿಲಿನ ರೆಕ್ಕೆಯಲ್ಲಿ ಬಣ್ಣದ ಕಣ್ಣು ಗಳ ಸಾಲು, ಸಾಮೂಹಿಕಕವಾಯತು [Mass Drill], ಪಥ ಚಲನ [March past] ಮೊದಲಾದವುಗಳು ಮೇಲೆ ಹೇಳಿದ ಪುನರಾವರ್ತನೆಯ ತತ್ವದ ಉದಾಹರಣೆಗಳು. ಪ್ರಕೃತಿಯ ಎಲೆ,

ಹೂ ಮೊಗ್ಗು ಮೊದಲಾದವುಗಳನ್ನು ಸುಳುವುಗಳನ್ನಾಗಿ ರೂಪಾಂತರಿಸಬಹುದು. ಬೊಂಬಾಯಿ, ಕೊಯಂಬತ್ತೂರು ಮೊದಲಾದ ಪ್ರದೇಶಗಳಲ್ಲಿ ವಸ್ತ್ರದ ಮಿಲ್ಲುಗಳಿವೆ. ಧೋತ್ರದ ಅಂಚು, ಸೀರೆಸೆರಗು, ಚೀಟವಸ್ತ್ರಗಳಿಗಾಗಿ ನೀವು ಸುಂದರ ನಮೂನೆಗಳನ್ನು ರಚಿಸಿಕೊಟ್ಟರೆ ಅವರು ನಿಮಗೆ ಹಣ ಕೊಟ್ಟು ಅವುಗಳನ್ನು ಕೊಂಡುಕೊಳ್ಳುತ್ತಾರೆ ಮತ್ತು ಅವುಗಳನ್ನು ಹೊಸ ವಸ್ತ್ರ ನೇಯುವಾಗ ಉಪಯೋಗಿಸುತ್ತಾರೆ. ಆಭರಣದ ಅಂಗಡಿಗಳಲ್ಲಿ, ಕೈಗಾರಿಕಾ ಕಾರ್ಖಾನೆಗಳಲ್ಲಿ ಡಿಸೈನರ್ [Designer] ರನ್ನು ನೇಮಿಸಿಕೊಂಡು ಒಳ್ಳೆ ಸಂಬಳ ಕೊಡುತ್ತಾರೆ. ನೀವೂ ಇಲ್ಲಿ ಈಗ ಅಂತಹುದನ್ನು ರಚಿಸಿ ತೋರಿಸಿರಿ" ಎಂದು ಮಾತುಕತೆ ಆರಂಭಿಸಬೇಕು. ವಾಸ್ತು ಶಿಲ್ಪಗಳಲ್ಲೂ, ಬಟ್ಟೆಬರೆ, ಆಭರಣ, ಕೈಗಾರಿಕಾ ವಸ್ತುಗಳಲ್ಲೂ ಕಾಣುವ ನಮೂನೆಗಳ ಮೂಲರೂಪಗಳನ್ನು ಗಮನಿಸಲು ಬೋಧಿಸಬೇಕು. ರಚಿತವಾದ ಪೂರ್ಣನಮೂನೆಗಳನ್ನೇ ನಕಲು ತೆಗೆಯದೆ ಆ ಮೂಲರೂಪಗಳ ಜೋಡಣೆಗಳಿಂದ ಅವರದ್ದೇ ಆದ ಹೊಸರಚನೆಗಳನ್ನು ಮಾಡಲು ಪ್ರೇರಿಸಬೇಕು. ಕ್ರಮವರಿತು ಇಡುವಿಕೆ ಮತ್ತು ವರ್ಣಾನುಭವಗಳನ್ನು ಹೆಚ್ಚಿಸಲು ಅಲಂಕಾರಿಕ ನಮೂನಾರಚನೆಯು ಉಪಯೋಗಕರ, ಆದರೆ ಯೋಚನೆಗಳನ್ನು ವ್ಯಕ್ತಪಡಿಸುವ ಆಲೋಚನಾ ಸಾಮರ್ಥ್ಯವನ್ನು ಹೆಚ್ಚಿಸುವ ಕೃತಿರಚನೆ ಪ್ರಧಾನಪಾತ್ರವಾಗಿರಬೇಕು.

ಸಾಹಿತ್ಯ, ಚಿತ್ರ, ಸಂಗೀತ, ನಾಟಕ, ನೃತ್ಯ, ಶಿಲ್ಪ, ವಾಸ್ತು ಇವು ಏಳು ಲಲಿತ ಕಲೆಗಳು. ಕೆಲವರು ಇವುಗಳನ್ನು ನಿರ್ಮಿಸಬಲ್ಲರು. ಹಲವರು ರಸಾಸ್ವಾದನೆ ಮಾಡಿ ಆನಂದಪಡಬಲ್ಲರು. ಸಮಾಜಕ್ಕೆ ಈ ಎರಡು ವರ್ಗದವರೂ ಬೇಕು. ಕಲೆಯನ್ನು ಮೆಚ್ಚಿ-ಸಂತೋಷಪಡಲು ಕೂಡ ತರಬೇತಿ ಬೇಕು. ಆ ತಿಳಿವಳಿಕೆ

ಯನ್ನು ನೀಡದ ಶಿಕ್ಷಣವು ಪ್ರಗತಿಪರವಾದುದಲ್ಲ; ಅದು ಅಪೂರ್ಣ ಶಿಕ್ಷಣವಾಗುವುದು. ಮಕ್ಕಳಲ್ಲಿ ಲಲಿತಕಲೆಗಳ ಪರಿಜ್ಞಾನ ಹಾಗೂ ಅದನ್ನು ಮೆಚ್ಚುವ ಗುಣಗಳನ್ನು ಪೋಷಿಸಿ ಸಂವರ್ಧಿಸಬೇಕು.

ಮಕ್ಕಳ ಚಿತ್ರಗಳನ್ನು ಸಹಾನುಭೂತಿಯಿಂದ ನೋಡಲು ಆದಿ ಮಾನವ ಚಿತ್ರಕಲೆ, ಕಾಲಕಾಲದ ಚಿತ್ರಶೈಲಿ, ನವ್ಯಕಲಾಕೃತಿ ಆಧುನಿಕ ಕಲಾಗತಿ, ಕೈಗಾರಿಕಾ ವಸ್ತುಗಳಲ್ಲಿ ಕಲಾಸೌಂದರ್ಯ, ಕಲಾಸಂಗ್ರಹಾಲಯ ಹಾಗೂ ವಸ್ತುಸಂಗ್ರಹಾಲಯಗಳ ಸಂದರ್ಶನ ಮತ್ತು ಚಿತ್ರಕಲೆಯ ಇತಿಹಾಸದ ಪರಿಚಯ ಪಡೆದಿರುವುದು ಆವಶ್ಯಕವಾಗಿದೆ.

## ಕಲಾಶಿಕ್ಷಣದ ಉಪಕರಣಗಳು

ಮಕ್ಕಳ ಚಿತ್ರಕಲೆ ಎಂದರೆ ಅವರ ಆತ್ಮಪ್ರಕಟಣೆ. ಅದು ನಾನಾ ಮುಖವಾಗಿ ರೂಪುಗೊಳ್ಳುತ್ತದೆ. ಆದುದರಿಂದ ಈ ಸ್ಥಿತಿ ಯಲ್ಲಿ ಕಲೆ ಮತ್ತು ಕೈ ಕಸಬುಗಳು [Crafts] ಪ್ರತ್ಯೇಕ ವಿಚಾರ ಗಳೆಂದು ಭಾವಿಸಬಾರದು. ಕೈಕೆಲಸ ಕೂಡ ಭಾವಪ್ರಕಾಶನದ ಒಂದು ಮಾಧ್ಯಮವಾಗಿದೆ.

**ಕಾಗದ, ಬಣ್ಣಗಳು**–ಮಕ್ಕಳಿಗೆ ಚಿತ್ರಿಸಲು ಸಾಮಾನ್ಯವಾಗಿ "೧೧×೧೫" ಅಳತೆಯ ದಪ್ಪಕಾಗಗದನ್ನು ಕೊಡಬಹುದು. ಅದಕ್ಕಿಂತ ಚಿಕ್ಕದು ಹಿತಕರವಲ್ಲ. ಬಿಳಿ ಕಾಗದ ಮಾತ್ರವಲ್ಲ, ತಿಳಿಹಸುರು, ನಸುಹಳದಿ, ನಸುಕಂದು ಮೊದಲಾದ ತರತರದ ಬಣ್ಣದ ಕಾಗದಗಳನ್ನು ಉಪಯೋಗಿಸಲು ಒದಗಿಸಬೇಕು. ಮಕ್ಕ ಳಿಗೆ ಬಣ್ಣಗಳೆಂದರೆ ಬಲು ಇಷ್ಟ. ಚಿತ್ರರಚನೆಗಾಗಿ ಬಣ್ಣದ ಬಳಪಗಳು [Pastel colours, Crayons] ಅನುಕೂಲ. ಅವು ಗಳಿಂದ ಚಿತ್ರಿಸಲು ಪುಸ್ತಕಗಳಿಗೆ ಹೊದಿಕೆ ಹಾಕಲು ಉಪಯೋಗಿ ಸುವ ಅಗ್ಗದ ಬೆಲೆಯ ಕಾಗದಗಳನ್ನು ಉಪಯೋಗಿಸಬಹುದು.

ಅವು ನಯವಾಗಿದ್ದರೆ ಚಿತ್ರರಚನೆಗೆ ಯೋಗ್ಯವಲ್ಲ; ಸ್ವಲ್ಪ ದೊರಗು ವೈಯು ಕಾಗದಗಳು ಉತ್ತಮ.

'ಇವತ್ತು ನಾವು ಬಳಪದಿಂದ ಚಿತ್ರಮಾಡೋಣ,' 'ಇವತ್ತು ಜಲವರ್ಣದಿಂದ' 'ಇವತ್ತು ಮಸಿಕಡ್ಡಿಯಿಂದ' (Charcoal) ಎಂದು ಆಯಾದಿನದ ಪಾಠಕ್ಕಾಗಿ ಚಿತ್ರಸಾಧ್ಯನವನ್ನು ಸೂಚಿಸ ಬಹುದು, ಆದರೆ ಅದು ಕಡ್ಡಾಯವಾಗಬಾರದು.

**ಬಣ್ಣಗಳು-ಜಲವರ್ಣ** [Water colour]— ವನ್ನು ಉಪಯೋಗಿಸುವಾಗ ಮೆತ್ತಗಾದ ಬಣ್ಣಗಳ ಟ್ಯೂಬ್‌ಗಳು ಅನು ಕೂಲ. ಬಣ್ಣಗಳನ್ನು ಪಿಂಗಾಣಿ ಚಿಕ್ಕ ತಟ್ಟೆಗಳಿಗೆ ಬೇಕಾಗು ವಂತೆ ಸ್ವಲ್ಪಸ್ವಲ್ಪವಾಗಿ ಹಾಕಿಕೊಳ್ಳಬಹುದು. ಬಣ್ಣಗಳಿಗಾಗಿ ತಗಲುವ ವೆಚ್ಚವನ್ನು ಕಡಮೆಮಾಡಲು ಬೇಕಾದ ಬಣ್ಣಗಳ ಹುಡಿ ಗಳನ್ನು ಕೊಂಡುಕೊಂಡು ನೀರು ಮತ್ತು ಸ್ವಲ್ಪ ಗೋಂದಿನಲ್ಲಿ ಕಲಸಿ ಉಪಯೋಗಿಸಬಹುದು. ಚಿಕ್ಕಮಕ್ಕಳಿಗೆ ಆರಕ್ಕಿಂತ ಹೆಚ್ಚು ಬಣ್ಣಗಳನ್ನು ಕೊಡುವುದು ಬೇಡ. ಮೂರು ಮೂಲ ಬಣ್ಣ ಗಳನ್ನು ಮತ್ತು ಹಸುರು, ನೇರಳೆ ಹಾಗೂ ಕಪ್ಪು ಬಣ್ಣಗಳನ್ನು ಕೊಡಬಹುದು. ಕಾಗದಗಳ ಎರಡೂ ಬದಿಗಳಲ್ಲಿ ಚಿತ್ರಿಸ ಬಹುದು. ಧನಾಭಾವ ವಿಶೇಷ ಇರುವಲ್ಲಿ ಸೀಮೆಸುಣ್ಣ [Chalk] ಕರಿಹಲಗೆ [Black Board], ಸ್ಲೇಟು, ಕಡ್ಡಿ, ರಟ್ಟು, ಮಸಿ ಮೊದಲಾದುವುಗಳನ್ನು ಉಪಯೋಗಿಸಬಹುದು. ಚಿಕ್ಕಮಕ್ಕಳು ಚಾಪೆ ಜಮಖಾನ ಹಾಸಿದ ನೆಲದ ಮೇಲೆ ಕುಳಿತು ಚಿತ್ರಿಸಬಹುದು. ಆಗ ಮಕ್ಕಳಿಗೆ ತಕ್ಕುದಾದ ಎಂದರೆ ತಗ್ಗಾದ ಮೇಜುಗಳಿರಬೇಕು. ಉಪಕರಣಗಳನ್ನು ಇಟ್ಟುಹೋಗಲು ಆ ಮೇಜುಗಳಲ್ಲೇ ಅರೆ ಗಳು [Drawers] ಇರುವುದು ಉತ್ತಮ. ಉಪಕರಣಗಳ ವಿಷ ಯದಲ್ಲಿ ಜಾಗ್ರತೆ ವಹಿಸುವ, ಜೋಪಾನವಾಗಿ ಇಟ್ಟು ಹೋಗುವ

ಗುಣಗಳನ್ನು ಆರಂಭದಿಂದಲೇ ಅಭ್ಯಾಸ ಮಾಡಿಸಬೇಕು. ಆ ಶೀಲವು ಭವಿಷ್ಯಜೀವನದಲ್ಲಿ ಉಪಯೋಗಕರವಾಗುವುದು. ಪಾಠ ಮುಗಿದೊಡನೆ ಕುಂಚಗಳನ್ನು ತೊಳೆದು ಕೂದಲುತುದಿಯನ್ನು ಮೇಲ್ಮುಖವಾಗಿ ಲೋಟಗಳಲ್ಲಿ ಇರಿಸಿ ಹೋಗುವ ಅಭ್ಯಾಸ ಮಾಡಿಸಬೇಕು.

**ತೈಲವರ್ಣ**—ಪ್ರಾಥಮಿಕ ಶಾಲೆಯ ಮಕ್ಕಳ ಚಿತ್ರಗಳಿಗಾಗಿ ತೈಲವರ್ಣಗಳೆಂದರೆ ಆಶ್ಚರ್ಯವಾಗಬಹುದು. ಅದಕ್ಕೆ ಬೆಲೆ ಜಾಸ್ತಿ ಮತ್ತು ಅದು ಮಹತ್ವದ್ದು ಎಂದು ಹಲವರ ಭಾವನೆ. ಅದರೆ ಅವರಲ್ಲಿ ಅಗ್ಗದ ಬಣ್ಣಗಳೂ ಇರುತ್ತವೆ. ಸಣ್ಣ ಪುಟ್ಟ ಚಿತ್ರಾಧಾರಗಳು [Easels] ಬೇಕು. ಕ್ಯಾನ್ ವಾಸ್‌ನ ಬದಲಿಗೆ ಬಿಳಿ ಬಣ್ಣ ಬಳಿದ ರಟ್ಟು, ಪ್ಲೈವುಡ್ ಹಲಗೆಯನ್ನು ಉಪಯೋಗಿಸಬಹುದು. ವರ್ಣ ಮಿಶ್ರಮಾಡಲು ಸಣ್ಣ ಗಾತ್ರದ ಪ್ಲೈವುಡ್ ಹಲಗೆ ಪ್ರಯೋಜನಕಾರಿ. ಬಣ್ಣ ಹಾಕಲು ಎಳಗುರಿ [Hog] ಕೂದಲ ಕುಂಚಗಳನ್ನೂ, ಬಣ್ಣ ತೆಳುಮಾಡಲು ಟರ್ಪೆಂಟೈನನ್ನೂ ಉಪಯೋಗಿಸಬಹುದು. ಈ ತೈಲವರ್ಣವನ್ನು ನೈರ್ಮಲ್ಯದ ತಿಳುವಳಿಕೆ ಬಂದಿರುವ ದೊಡ್ಡಮಕ್ಕಳಿಗೆ ಮಾತ್ರ ಒದಗಿಸಬಹುದು. ಏಕೆಂದರೆ ಈ ಬಣ್ಣವು ಮೈ, ಕೈ, ಬಟ್ಟೆಗಳಿಗೆ ತಗುಲಿದರೆ ಚೊಕ್ಕಟ ಮಾಡಲು ಸ್ವಲ್ಪ ಕಷ್ಟವಾಗುವುದು. ಪೆನ್ಸಿಲ್ಲು, ಇದ್ದಿಲು, ಬಳಪ, ಜಲವರ್ಣ ಮೊದಲಾದುವುಗಳನ್ನು ಎಲ್ಲಾ ಮಕ್ಕಳಿಗೂ ಕೊಡಬಹುದು.

ವರ್ಣಚಿತ್ರ ರಚನೆಯು ಎಲ್ಲಾ ಮಕ್ಕಳಿಗೂ ಇಷ್ಟವಾದುದು ಮತ್ತು ಅನುಕೂಲವಾದುದು. ಆದರೂ ಒಬ್ಬಿಬ್ಬರು ಅದರಲ್ಲಿ ಇಷ್ಟಪಡದವರು ಇರುವುದುಂಟು. ಅಂತಹ ಮಕ್ಕಳಿಗಾಗಿ ಚಿತ್ರ ರಚನೆ ಬಿಟ್ಟು ಅವರಿಗೆ ಅಭಿರುಚಿಯದ್ದಾದ ಜೇಡಿಮಣ್ಣಿನ ಕೆಲಸ

ಬಟಾಟೆ ಅಥವಾ ಲಿನೋ ಕತ್ತರಿಸಿ ಅಚ್ಚು ತಯಾರಿಸುವಿಕೆ, ರಂಗೋಲಿ, ಅಲಂಕಾರ ನಮೂನಾ ರಚನೆ, ಮಡಕೆಗಳಮೇಲೆ ಸುಳಿವು ನಮೂನೆಗಳನ್ನು ಚಿತ್ರಿಸುವುದು, ಕಾಗದ ಕತ್ತರಿಸಿ ಆಕೃತಿ ರಚನೆ, ವಿವಿಧ ಚಿತ್ರಭಾಗಗಳನ್ನು ಕತ್ತರಿಸಿ ಒಂದರಮೇಲೊಂದನ್ನು ಹಚ್ಚಿ ಹೊಸತೊಂದು ರಚನೆ ಮಾಡುವುದು, ಕಸೂತಿ, ಗಿಡಗಳ ಗೆಲ್ಲುಗಳ ರಾಶಿಯಲ್ಲಿ ಚಿತ್ರವಿಚಿತ್ರ ಆಕೃತಿಗಳನ್ನು ಆರಿಸುವಿಕೆ, ಪೇಪರ್‌ಮೆಷ್ ಕೆಲಸ ಮೊದಲಾದ ಕೈಕಸಬುಗಳಲ್ಲಿ ಬೇಕಾದುದನ್ನು ಆರಿಸಲು ಅವಕಾಶವಿರಬೇಕು. ಅಂತಹ ಮಕ್ಕಳು ಈ ಕೆಲಸಗಳನ್ನು ತತ್ಪರತೆಯಿಂದ ಮಾಡುವುದುಂಟು. ಈ ಪ್ರಕಾರ ಮಕ್ಕಳ ಮನೋಗತಿಗಳಿಗನುಗುಣವಾಗಿ ಕೃತಿಮಾಧ್ಯಮ ಬದಲಾವಣೆ ಮಾಡುವುದು ಪ್ರಯೋಜನಕಾರಿಯಾಗಿದೆ.

ವಿದೇಶಗಳಲ್ಲಿ ಈ ಕಲಾಪಾಠಕ್ಕೆ ಆಗತ್ಯವಾದ ವಸ್ತುಸಾಮಗ್ರಿಗಳನ್ನು ಒದಗಿಸುತ್ತಿರುವ ಅನೇಕ ಸಂಸ್ಥೆಗಳು ಇವೆ. ಆ ಸೌಲಭ್ಯಗಳು ಈ ಪಾಠದ ಸಫಲತೆಗೆ ಕಾರಣಗಳಾಗಿವೆ. ತಕ್ಕಉಪಕರಣಗಳು ಇಲ್ಲವಾದರೆ ಕಲಾಶಿಕ್ಷಣವು ದುಸ್ಸಾಧ್ಯವಾಗುವುದು. ನಮ್ಮಲ್ಲಿ ಸಾಮಾನ್ಯತರದ ಬಣ್ಣ ಮತ್ತು ಕುಂಚಗಳು ಕೂಡ ಎಲ್ಲರಿಗೂ ದೊರಕುವುದಿಲ್ಲವೆಂಬುದು ವಿಷಾದದ ವಿಷಯವಾಗಿದೆ.

**ಪ್ರತಿಮಾ ಕೃತಿರಚನೆ** — ಇದಕ್ಕಾಗಿ ಪ್ಲಾಸ್ಟಿಸಿನ್ ಮತ್ತು ಜೇಡಿಮಣ್ಣು [Clay] ಉತ್ತಮವಾಗಿದೆ. ಪ್ಲಾಸ್ಟಿಸಿನ್ ಎಂಬುದು ಮೃದುವಾಗಿಯೇ ಉಳಿಯುತ್ತದೆ. ಆದುದರಿಂದ ಒಮ್ಮೆ ಮಾಡಿದ ಪ್ರತಿಮೆಯನ್ನು ಅಳಿದು ಮುದ್ದೆಮಾಡಿ ಪುನಃ ಪುನಃ ಅದೇ ಪ್ಲಾಸ್ಟಿಸಿನನ್ನು ಕೆಲವುಬಾರಿ ಉಪಯೋಗಮಾಡಬಹುದು. ಇದು ವಿವಿಧ ಬಣ್ಣಗಳಲ್ಲಿ ದೊರೆಯುತ್ತದೆ. ಆದರೆ ಇದಕ್ಕೆ ಬೆಲೆ ಜಾಸ್ತಿ. ಹಣದ ಅಭಾವ ಇರುವಲ್ಲಿ ಕುಂಬಾರನ ಆವೆ ಮಣ್ಣನ್ನು

ಉಪಯೋಗಿಸಬಹುದು. ಅದು ಒಣಗಿ ಗಟ್ಟಿಯಾಗದಂತೆ ಆ ರಾಶಿಯಮೇಲೆ ಒದ್ದೆ ವಸ್ತ್ರವನ್ನು ಮುಚ್ಚಿ ಆಗಾಗ ನೀರನ್ನು ಚಿಮುಕಿಸುತ್ತಿರಬೇಕು. ಆರಂಭದಲ್ಲಿ ಸ್ವಲ್ಪ ಮಣ್ಣನ್ನು ತೆಗೆದು ಅಂಗೈಯಿಂದ ಒಂದು ಹಲಗೆಯ ಮೇಲೆ ಉರುಳಿಸುತ್ತಾ ಸ್ಥಂಭಾಕೃತಿ ರಚಿಸಬೇಕು. ಹಾಗೆಯೇ ಚೆಂಡು, ಘನ, ಶಂಕು ಮೊದಲಾದ ಸುಲಭಾಕೃತಿಗಳ ಜೋಡಣೆಗಳಿಂದಲೇ ಪ್ರಾಣಿ, ಗೊಂಬೆ ಮೊದಲಾದ ವಿವಿಧ ಪ್ರತಿಮೆಗಳನ್ನು ಮಾಡಬಹುದು. ಪ್ರತಿಮಾರಚನೆ ಕೆತ್ತನೆ ಮುಂತಾದುವುಗಳಲ್ಲಿ ವಿವರಗಳು ಮತ್ತು ಶುದ್ಧಾಕಾರಗಳು ಬೇಕೆಂದು ವಯಸ್ಕರ ದೃಷ್ಟಿಯಿಂದ ನಿರೀಕ್ಷಿಸಬಾರದು. ವಿಚಾರದ ಛಾಯೆಗಳು ಆದರಲ್ಲಿ ತೋರಿಬಂದರೆ ಸಾಕು. ಶಿಶುಚಿತ್ರಕಲೆ ಕುರಿತು ಹೇಳಿದ ಎಲ್ಲಾ ಮಾತುಗಳು ಈ ಕೈಕಸಬುಗಳಿಗೂ ಅನ್ವಯಿಸುತ್ತವೆ. ಬಗೆಬಗೆಯ ಬಣ್ಣಗಳ ಮಣ್ಣಾದರೆ ಆಕರ್ಷಣೆಯು ಜಾಸ್ತಿ. ಅದಕ್ಕಾಗಿ ಮಣ್ಣಿನೊಡನೆ ಬಣ್ಣದ ಹುಡಿಯನ್ನು ಬೆರಕೆ ಮಾಡಬಹುದು. ಮೂರುತಿಯಲ್ಲಿ ಅಲ್ಲಲ್ಲಿ ಮಣ್ಣನ್ನು ಕೆತ್ತಿ ತೆಗೆಯಲು ಅಲಂಕಾರ ರೇಖೆಗಳನ್ನು ಗೀರಿ ತೋರಿಸಲು ತೆಳ್ಳಗಿನ ಬಿದಿರು ಚೂರುಗಳನ್ನು ಉಪಯೋಗಿಸಬಹುದು. ಮಣ್ಣಿನ ಮಾದರಿ ತಯಾರಿಸಲು ಮಕ್ಕಳಿಗೆ ಅನುಕೂಲವಾದ ಪ್ರತಿಮಾಕಾರರ ಕಾಲು ಮಣೆಗಳು [Moulding stools] ಬೇಕು. ಅವುಗಳ ಅಭಾವವಿರುವಲ್ಲಿ ದಪ್ಪ ರಟ್ಟುಗಳಮೇಲೂ ಗೊಂಬೆಗಳನ್ನು ನಿರ್ಮಿಸಬಹುದು. ಮೂರುತಿಯು ಒಣಗಿದಮೇಲೆ ಅದನ್ನು ಆವಿಗೆಯಲ್ಲಿಟ್ಟು ಸುಟ್ಟರೆ ಉತ್ತಮ. ಅದು ಇಲ್ಲವಾದರೆ ಸಗಣಿ ಬೆರಣಿಯು, ಅದು ಕೂಡಾ ಅನನುಕೂಲವಾದರೆ ಸೌದೆ ಬೆಂಕಿಯಲ್ಲಿಟ್ಟು ಸುಡಬಹುದು.

**ಕೆತ್ತನೆಗಳು**—ಮಣ್ಣಿನಲ್ಲಿ ಮೆತ್ತಿ ಮಾಡಿದಂತೆ ಬಟಾಟೆ,

ಸಾಬೂನು, ಬೆಂಡಿನಂತಹ ವಸ್ತುಗಳಲ್ಲಿ ಕೆತ್ತಿ ಗೊಂಬೆಗಳನ್ನೂ, ಸುಳಿವು ನಮೂನೆಗಳ ಅಚ್ಚುಗಳನ್ನೂ ನಿರ್ಮಿಸಬಹುದು. ಸುಳಿವುಗಳ ಪುನರಾವರ್ತನೆಯು ಅಲಂಕಾರ ಕಲೆಯ ಒಂದು ವಿಧಾನ. ಬಟಾಟೆಯಲ್ಲಿ ಒಂದು ನಮೂನೆಯನ್ನು ಕೆತ್ತಿ, ಶಾಯಿ ತಾಗಿಸಿ ಕಾಗದದ ತುಂಬಾ ಕ್ರಮವರಿತು ಒತ್ತಿ ತಮ್ಮ ಪುಸ್ತಕಗಳಿಗೆ ಚಂದ ಕಾಣುವ ಹೊದಿಕೆಯನ್ನಾಗಿ ಮಾಡಿ ಉಪಯೋಗಿಸಿ ಸಂತೋಷ ಪಡುತ್ತಾರೆ.

**ಕಾಗದ ಕತ್ತರಿಸುವಿಕೆ**—ಕಾಗದಗಳನ್ನು ಕತ್ತರಿಸಿ ಹೂವು, ಸೇತುವೆ, ಬೆಕ್ಕು, ಶಿಖರ, ಮರ ಮೊದಲಾದ ವಿವಿಧ ಆಕೃತಿಗಳನ್ನು ರಚಿಸಬಹುದು. ಹಳ್ಳಿಜನರು, ತುಳಸಿಹಬ್ಬ, ಊಗದೇಗುಲದ ಉತ್ಸವ ಮುಂತಾದ ಸಂದರ್ಭಗಳಲ್ಲಿ ಬಾಳೆ ಹಾಳೆಗಳಿಂದ ತಾತ್ಕಾಲಿಕ ಮಂಟಪಗಳನ್ನು ರಚಿಸುತ್ತಾರೆ. ಆ ಹಾಳೆಗಳ ಮೇಲೆ ಕೆಸು, ಮರಸಣಿಗೆ ಎಲೆಗಳನ್ನು, ಹೂ, ಹಕ್ಕಿ, ಹಾವು, ಎಲೆ, ಪ್ರಾಣಿ, ದೇವರ ಮೂರುತಿ, ಅಲಂಕಾರ, ನಮೂನೆಗಳಾಗಿ ಕತ್ತರಿಸಿ, ಮುಳ್ಳುಚುಚ್ಚಿ ತಗಲಿಸುತ್ತಾರೆ. ಎಣ್ಣೆ ಉಜ್ಜಲು ಆ ಕಡುಹಸುರು ಬಣ್ಣಕ್ಕೆ ಮಿರುಗು ಬರುತ್ತದೆ. ಬಿಳಿ ಬಣ್ಣದ ಹಾಳೆಗಳ ಮೇಲೆ ಹೊಳೆಯುವ ಆ ಕಡುಹಸುರು ಆಕೃತಿಗಳು ಬಲುಸುಂದರವಾಗಿ ಕಾಣುತ್ತವೆ. ಅದೇ ಪ್ರಕಾರ ಮಕ್ಕಳು ಬಣ್ಣದ ಕಾಗದಗಳನ್ನು ಕತ್ತರಿಸಿ ಇತರ ಕಾಗದಗಳಮೇಲೆ ಹಚ್ಚಬಹುದು. ಆದರೆ ಮೇಲೆ ನಮೂದಿಸಿದ ವಯಸ್ಕರು ಮಾಡಿದ ಮಂಟಪಗಳ ಕ್ಲಿಷ್ಟ ಹಾಗೂ ಸುಂದರ ರಚನೆಗಳನ್ನು ಈ ಮಕ್ಕಳ ಕೃತಿಗಳಲ್ಲಿ ನಿರೀಕ್ಷಿಸಬಾರದು

ವೃತ್ತಪತ್ರಿಕೆ, ತಾರೀಖುಪಟ್ಟಿ, ಬೇಡವಾದ ಪುಸ್ತಕಗಳಿಂದ ವಿವಿಧ ಪಕ್ಷಿ, ಪ್ರಾಣಿ, ನದಿ, ಪ್ರಕೃತಿ ದೃಶ್ಯ, ಕೆಲಸಗಾರರು ಮೊದಲಾದ ಚಿತ್ರಗಳನ್ನು ಕತ್ತರಿಸಿ ತಕ್ಕುದಾದ ಹಿನ್ನೆಲೆ ಮುನ್ನೆಲೆಗಳನ್ನು

ಆರಿಸಿ ಒಂದರ ಮೇಲೆ ಮತ್ತೊಂದನ್ನು ಹಚ್ಚಿ ಒಂದು ಹೊಸ ಸೃಷ್ಟಿಯನ್ನು ನಿರ್ಮಿಸಬಹುದು. ಯಾವಾಗಲೂ ಚಿತ್ರ ಮಾತ್ರ ರಚಿಸುತ್ತಾ ಇರುವ ಮಕ್ಕಳಿಗೆ ಇಂತಹ ಬದಲಾವಣೆಗಳು ಇಷ್ಟವಾಗುತ್ತವೆ. ವಸ್ತು ಪ್ರಚಾರ ಅಥವಾ ಜಾಹೀರಾತು ಕಲಾವಿದರು ಈ ವಿಧಾನವನ್ನು ಬಹಳವಾಗಿ ಉಪಯೋಗಿಸುತ್ತಾರೆ. ಈ ಕಾಗದ ಕತ್ತರಿಸುವಿಕೆ ಮತ್ತು ಚಿತ್ರಗಳನ್ನು ಕತ್ತರಿಸಿ ಹಚ್ಚಿ ಹೊಸತೊಂದು ಸೃಷ್ಟಿ ನಿರ್ಮಿಸುವುದು ನೈಜ ಚಿತ್ರರಚನೆಗೆ ಒಲಿದ ಮಕ್ಕಳಿಗಾಗಿ ಆಗಿದೆ.

**ರಂಗೋಲಿ**—ಹಳ್ಳಿಗಳಲ್ಲಿ ಬೆಣಚುಕಲ್ಲಿನ ಪುಡಿ ಅಥವಾ ಇತರ ಹಿಟ್ಟು ಹುಡಿಗಳನ್ನು ಉಪಯೋಗಿಸಿ ರಂಗೋಲಿ ಹಾಕುವುದು ಎಲ್ಲರಿಗೂ ತಿಳಿದ ವಿಷಯ. ಎಲ್ಲಾ ಕಡೆ ಸಿಗುವ ಬಣ್ಣ ಬಣ್ಣದ ಕಲ್ಲು, ಮಣ್ಣು, ಎಲೆ, ಧಾನ್ಯಗಳನ್ನು ಹುಡಿಮಾಡಿಟ್ಟು ಕೊಂಡು ಅಥವಾ ಅಂಗಡಿಯಲ್ಲಿ ದೊರಕುವ ಬಣ್ಣದ ಹುಡಿಗಳನ್ನು ಸ್ವಲ್ಪ ಗೋಂದು ನೀರು ಬೆರಸಿ ಮರ ಸಿಗಿದ ಹುಡಿಗಳೊಡನೆ ಕಲಸಿ ಆ ರಂಗೋಲಿ ನಮೂನೆಗಳಿಗೆ ಬಣ್ಣ ಹಾಕಬಹುದು ಅಥವಾ ಈ ಮಾಧ್ಯಮದಿಂದ ವರ್ಣಚಿತ್ರಗಳನ್ನೇ ರಚಿಸಬಹುದು.

**ಮಡಕೆ ಮೇಲೆ**—ಬಣ್ಣದ ಹುಡಿಗಳನ್ನು ಗೋಂದಿನ ನೀರಿನಲ್ಲಿ ಅರೆದು ಆ ಬಣ್ಣಗಳಿಂದ ಮಡಕೆಗಳ ಮೇಲೆ ಆಲಂಕಾರಿಕ ನಮೂನೆಗಳನ್ನು ರಚಿಸಬಹುದು.

**ಕಾಗದದ ಗೊಜ್ಜು**—Papier mache—ಇದು ಕೂಡ ಅಗ್ಗದ ವಸ್ತು. ಹರಿದು ಬಿಸಾಡುವ ಕಾಗದದ ಚೂರುಗಳನ್ನು ನೀರಲ್ಲಿ ನೆನಸಿ ಸ್ವಲ್ಪ ಗೋಂದು ಅಥವಾ ಮೆಂತೆ ಬೀಜಗಳನ್ನು ಸೇರಿಸಿ ನುಣ್ಣಗೆ ಅರೆದು ಮುದ್ದೆ ಮಾಡಿ ವಿವಿಧ ಆಕೃತಿಗಳನ್ನೂ ಸುಲಭವಾದ ಮೂರುತಿಗಳನ್ನೂ ರಚಿಸಬಹುದು.

**ಕಲಾತರಗತಿಯ ಕೋಣೆ**—ಒಂದು ವ್ಯವಸ್ಥಿತವಾದ, ಪರಿಣಾಮಕಾರಿಯಾದ ಕಲಾತರಗತಿಯನ್ನು ನಡೆಯಿಸಲು ಪ್ರತ್ಯೇಕ ಕೋಣೆಯು ಅಗತ್ಯ. ಸುತ್ತಲೂ ಇರುವ ವಸ್ತು ಸಾಮಗ್ರಿಗಳು ಸನ್ನಿವೇಶಗಳು ಮಕ್ಕಳ ಮನಸ್ಸಿನ ಮೇಲೆ ಪ್ರಭಾವ ಬೀರುತ್ತವೆ. ಆದಕಾರಣ ಮಕ್ಕಳನ್ನು ಕಲಾಕೃತಿರಚನೆಗೆ ಪ್ರೇರಿಸುವಂತೆ ಕೋಣೆಯಲ್ಲಿ ಏರ್ಪಾಡುಗಳಿರಬೇಕು. ಬಣ್ಣ, ಕುಂಚ, ತಟ್ಟೆ, ಕಾಗದ, ವಸ್ತ್ರ ಮೊದಲಾದ ಉಪಕರಣಗಳನ್ನಿಡಲು ಮಕ್ಕಳಿಗೆ ನಿಲುಕುವ ಎತ್ತರದಲ್ಲಿ ಅನೇಕ ವಿಭಾಗಗಳುಳ್ಳ ಕಪಾಟುಗಳಿರಬೇಕು.

**ಪ್ರದರ್ಶನ**—ಗೋಡೆಗಳಿಗೆ ಪ್ಲೈವುಡ್, ದಪ್ಪವಾದ ರಟ್ಟು ಅಥವಾ ಗೋಣಿ ಬಟ್ಟೆಗಳನ್ನು ತಗುಲಿಸಿ ಅವುಗಳ ಮೇಲೆ ಎಲ್ಲಾ ಮಕ್ಕಳ ಚಿತ್ರಕೃತಿಗಳನ್ನು ಪ್ರದರ್ಶಿಸಬೇಕು. ಕೆಲವನ್ನು ನಿಕೃಷ್ಟ ಕೃತಿಗಳೆಂದು ಪರಿಗಣಿಸಿ ತ್ಯಜಿಸಿಬಿಟ್ಟು ಆ ಮಕ್ಕಳ ಆತ್ಮ ವಿಶ್ವಾಸ ಕೆಡಿಸಬಾರದು. ಶಿಶುಚಿತ್ರ ಕೃತಿಗಳಲ್ಲಿ ಮೇಲು ಕೀಳುಗಳೆಂಬುದು ಇರುವುದಿಲ್ಲ. ಅ ತರಗತಿಯಲ್ಲಿ ವಯಸ್ಕರ ಕೃತಿಗಳನ್ನು ಇಡಬಾರದು. ಹಾಗೆ ಇಟ್ಟರೆ ಮಕ್ಕಳು ಅವುಗಳ ನಕಲು ತೆಗೆಯುತ್ತಾರೆ. ಅಲ್ಲಿ ಪ್ರದರ್ಶಿಸುವ ಮಕ್ಕಳ ಕೃತಿಗಳನ್ನು ಆಗಾಗ ನಿಯತಕಾಲಗಳಲ್ಲಿ ಬದಲಾಯಿಸುತ್ತಿರಬೇಕು. ಮಕ್ಕಳು ರಚಿಸಿದ ಕುಶಲಕಲಾಕೃತಿಗಳನ್ನು ಪ್ರತ್ಯೇಕ ಕಪಾಟುಗಳೊಳಗೆ ಅಂತರಗಳಲ್ಲಿ ಅಲಂಕಾರಿಕವಾಗಿ ಪ್ರದರ್ಶಿಸುತ್ತಿರಬೇಕು.

ಪ್ರಪಂಚದ ವಿವಿಧ ದೇಶಗಳ ಕಲೆ, ಕೈಗಾರಿಕಾನಮೂನೆಗಳ ಸಂಗ್ರಹವೂ ಇದ್ದು ಅವುಗಳು ಕೂಡ ಒಮ್ಮೊಮ್ಮೆ ಅವರ ದೃಷ್ಟಿಗೆ ಬೀಳುವಂತೆ ಮಾಡಬೇಕು. ಎಳೆಯ ಮಕ್ಕಳು ನವ್ಯಕಲಾಕೃತಿಗಳನ್ನು ಮೆಚ್ಚುತ್ತಾರೆಂಬುದು ಗಮನಾರ್ಹವಾದ ವಿಷಯ.

**ಕಲಾತರಗತಿ**—ಉಪನ್ಯಾಸ ಮಾಡಿ ಪ್ರಶ್ನೋತ್ತರಗಳಿಂದ

ಪಾಠಬೋಧಿಸುವುದಕ್ಕೂ ಕಲಾತರಗತಿಗಳಲ್ಲಿ ರಚನೆಗಾಗಿ ಪ್ರೇರಿಸುವುದಕ್ಕೂ ಅಂತರವಿದೆ. ಇಲ್ಲಿ ಪ್ರತಿಯೊಬ್ಬನ ರಚನೆಯ ಕಡೆ ಗಮನಿಸಿ ಉತ್ತೇಜನ ನೀಡಬೇಕು. ಅಲ್ಲದೆ ಆಗ ಇಡೀವರ್ಗವನ್ನು ಕೆಲಸದಲ್ಲಿ ತೊಡಗಿಸಿ ಇಡಬೇಕು. ಆದುದರಿಂದ ತರಗತಿಯ ವ್ಯವಸ್ಥೆ ಚೆನ್ನಾಗಿಲ್ಲದಿದ್ದರೆ ಗೊಂದಲವಾಗಬಹುದು. ಕಲಾತರಗತಿಗಾಗಿ ಸ್ಥಳಾವಕಾಶ ಚೆನ್ನಾಗಿರಬೇಕು. ಹಾಗಿಲ್ಲವಿದ್ದರೆ ಹತ್ತಿರದವರ ಅಂಗಿ ಬಟ್ಟೆಗಳಿಗೆ, ಗೋಡೆ ನೆಲಗಳಿಗೆ ಬಣ್ಣ ತಗುಲಬಹುದು. ಕಲಾವಿಭಾಗಕ್ಕಾಗಿ T ಆಕಾರದ ಕಟ್ಟಡವಾದರೆ ವಿಶೇಷ ಸೌಕರ್ಯ ವರ್ಣಚಿತ್ರರಚನೆಗಾಗಿ ಹೆಚ್ಚು ಮಕ್ಕಳು ಇರುತ್ತಾರೆ. ಆ ಬಗ್ಗೆ ಕಟ್ಟಡದ ವಿಶಾಲವಾದ ಮತ್ತು ದೊಡ್ಡ ವಿಭಾಗವನ್ನು ಉಪಯೋಗಿಸಬೇಕು. ಉಳಿದ ಭಾಗಗಳನ್ನು ಕಡಮೆ ಇರುವ ಕೈ ಕಸಬು [Craft] ಶಿಕ್ಷಣ ತರಗತಿ, ಪುಸ್ತಕ ಭಂಢಾರ, ಕಲಾಕೃತಿ ಹಾಗೂ ವಸ್ತು ಸಂಗ್ರಹಾಲಯ, ಉಪಕರಣಗಳ ದಾಸ್ತಾನು, ಕಲಾಶಿಕ್ಷಕರ ಕೊಠಡಿ ಮೊದಲಾದುವುಗಳಿಗೆ ವಿನಿಯೋಗಿಸಬಹುದು.

ಕಲಾತರಗತಿಯ ಮಕ್ಕಳ ಸಂಖ್ಯೆಯು ೨೫ ಕ್ಕೆ ಮೀರಿದ್ದರೆ ಉತ್ತಮ. ಆದುದರಿಂದ ಪ್ರತಿಯೊಬ್ಬ ವಿದ್ಯಾರ್ಥಿಯ ಕಡೆ ವೈಯುಕ್ತಿಕ ಲಕ್ಷ್ಯ ನೀಡಲು ಸಾಧ್ಯವಾಗುವುದು. ಅದಕ್ಕಾಗಿ ೨೦'×೨೫' ವಿಸ್ತಾರದ ಕೋಣೆಯಾದರೆ ಹಿತಕರ. ಅದರಲ್ಲಿ ೨೫-೩೦ ವಿದ್ಯಾರ್ಥಿಗಳು ಸೌಕರ್ಯದಿಂದ ಚಿತ್ರಿಸಬಹುದು ೨೨' × ೩೦' ವಿಸ್ತಾರದ ಕೋಣೆಯು ೩೦-೩೫ ವಿದ್ಯಾರ್ಥಿಗಳಿಗೆ ಸಾಕಾಗುವುದು. ೩೦'×೨೫' ಉದ್ದಗಲಗಳ ಕೋಣೆಯು ಸಾಮಾನ್ಯ ೪೦ ವಿದ್ಯಾರ್ಥಿಗಳಿಗಾಗಿ ಉಪಯೋಗವಾಗಬಹುದು. ಬೆಳಕಿನ ಸೌಲಭ್ಯಕ್ಕಾಗಿ ಕಲಾತರಗತಿ ಕೋಣೆಯು ಶಾಲಾ ಕಟ್ಟಡಗಳ ಗುಂಪಿನ ಮಧ್ಯೆ ಇರುವುದಕ್ಕಿಂತ ಹೊರವಲಯದಲ್ಲಿ ಉತ್ತಮ

ಭಾಗದಲ್ಲಿರಬೇಕು. ಆ ಕಟ್ಟಡವು ಪೂರ್ವದಿಂದ ಪಶ್ಚಿಮಕ್ಕೆ ನೀಡಿರುವುದು ಉತ್ತಮ. ಅದರಿಂದ ಬೆಳಕು ಬೇಗಬೇಗನೆ ಬದಲಾಗುತ್ತಿರದೆ ಬಡಗು ದಿಕ್ಕಿನಿಂದ ಏಕಪ್ರಕಾರವಾಗಿ ದೊರಕುವುದು. ಕಲಾಕಾರರಿಗೆ ಎಡಹೆಗಲಮೇಲಿಂದ ಹಿಂದಿನಿಂದ ಬೆಳಕು ಬೀಳುವಂತಾದರೆ ಹೆಚ್ಚು ಅನುಕೂಲ. ಗಾಳಿ ಬೆಳಕುಗಳಿಗಾಗಿ ದೊಡ್ಡದಾದ ಕಿಟಕಿಗಳು ಇರಬೇಕು. ಗೋಡೆಗಳ ಕೆಳಭಾಗಕ್ಕೆ ನೆಲದ ಮೇಲಿಂದ ನಾಲ್ಕೈದು ಅಡಿ ಎತ್ತರದ ತನಕ ಕರಿಹಲಗೆಯ ಬಣ್ಣ ಕೊಟ್ಟು ಅಲ್ಲಿ ಮಕ್ಕಳು ಇಚ್ಛಾನುಸಾರ ಚಿತ್ರ ರಚಿಸುವಂತೆ ಅವಕಾಶ ಮಾಡಿಕೊಡಬೇಕು. ಇವತ್ತಿನ ಪಾಠದಲ್ಲಿ ಯಾವ ವಿಷಯ ಪ್ರೇರಿಸೋಣ ? ಯಾವ ವಿಷಯ ಅಥವ ವಸ್ತು ಮಾಧ್ಯಮ ಬಳಸೋಣ? ಬಣ್ಣದಿಂದ ಮಲಿನವಾದ ನೀರನ್ನು ಚೆಲ್ಲಲು ಮತ್ತು ಶುದ್ಧವಾದ ನೀರನ್ನು ಪಡೆಯಲು ನೀರಿನ ದೊಡ್ಡ ಪಾತ್ರೆಗಳು ಸಮೀಪದಲ್ಲಿವೆಯೇ ? ವೇಳೆಯಾಗಲು ಒಣಗದೆ ಉಳಿದಿರುವ ವರ್ಣಚಿತ್ರಗಳು ಒಂದಕ್ಕೊಂದು ತಾಗಿ ಹಾಳಾಗದಂತೆ ಬೇರೆಬೇರೆಯಾಗಿ ಇಟ್ಟುಹೋಗಲು ಏರ್ಪಾಡುಗಳಿವೆಯೇ ? ಬಣ್ಣ, ಕುಂಚ, ನೀರಿನ ತಟ್ಟೆಗಳು, ಕಾಗದ, ಬಟ್ಟೆಚೂರು, ಆವೆಮಣ್ಣು ಬಳಪ, ಇದ್ದಿಲು ಮೊಲಾದ ಎಲ್ಲಾ ಉಪಕರಣಗಳು ತಕ್ಕ ಜಾಗಗಳಲ್ಲಿ ಸಿದ್ಧವಾಗಿ ಇವೆಯೇ ? ಪೀಠೋಪಕರಣಗಳೆಲ್ಲವೂ ಯಥಾಸ್ಥಾನಗಳಲ್ಲಿ ಕ್ರಮವಾಗಿ ಇವೆಯೇ? ಈ ಎಲ್ಲಾ ವ್ಯವಸ್ಥೆಗಳ ಕಡೆಗೆ ಅಧ್ಯಾಪಕನು ಪಾಠದ ಆರಂಭಕ್ಕಿಂತ ಮೊದಲು ಗಮನಿಸಬೇಕು.

ಮಹತ್ವದ್ದಾಗಿ ಗಣಿಸುವ ಪರೀಕ್ಷಾ ಪಾಠಗಳಿಗಾಗಿಯೇ ವಿನಿಯೋಗಿಸಲು ನಮ್ಮಲ್ಲಿ ಸಾಕಷ್ಟುಹಣ ಇಲ್ಲ. ಹಾಗಿರುವಾಗ ಈ ಕಲಾಪಾಠಕ್ಕಾಗಿ ಮೇಲಿನಂತೆ ಸೌಲಭ್ಯಗಳನ್ನೆಲ್ಲಾ ಪೂರೈಸಲು ಸಾಧ್ಯವೇ ? ಎಂದು ಕೇಳಬಹುದು. ಅದಕ್ಕೆ ಸಮಾಧಾನ

ವಿಷ್ಟೆ. ಆದರ್ಶವು ಹೀಗೆ ಇದೆ. ಮುಂದರಿದ ಇತರ ದೇಶಗಳಲ್ಲಿ ಕಲಾಶಿಕ್ಷಣವು ಈ ಪ್ರಕಾರ ನಡೆಯುತ್ತಿದೆ. ಆದರಿಂದ ಬೌದ್ಧಿಕ ಸಾಂಸ್ಕೃತಿಕ, ವ್ಯವಹಾರಿಕ, ವಾಣಿಜ್ಯ ಇನ್ನಿತರ ಬಹುತರ ಲಾಭಗಳು ಲಭಿಸಿವೆ. ಕಲಾಶಿಕ್ಷಣಕ್ಕಾಗಿ ವ್ಯಯ ಮಾಡುವ ಹಣ ದಿಂದ ಕೂಡಲೇ ಪ್ರತಿಫಲ ತೋರದಿದ್ದರೂ ವ್ಯರ್ಥವಾಗುವುದಿಲ್ಲ. ಅದರಿಂದ ಸುಸಂಸ್ಕೃತಾಭಿರುಚಿ, ರಸಾಭಿಜ್ಞತೆ, ರಚನಾತ್ಮಕ ಗುಣಗಳು ಅಭಿವೃದ್ಧಿಯಾಗುವುವು. ದೇಶದ ಕಲೆ ಕೈಗಾರಿಕಾ ವಸ್ತುಗಳ ಮಟ್ಟವು ಉತ್ತಮಗೊಳ್ಳಲು ತಜ್ಞರಾದ ಕೆಲವರು ಕಲಾ ವಿವರು ದುಡಿದರೆ ಸಾಲದು, ಜನಸಾಮಾನ್ಯರಲ್ಲಿ ಸೌಂದರ್ಯ ಪ್ರಜ್ಞೆ ಅಧಿಕವಾಗಬೇಕು. ಕಲಾತರಗತಿಗಳು ವಿದ್ಯಾಸಂಸ್ಥೆಗೆ ಭೂಷಣ ಪ್ರಾಯ ವಾಗಬಲ್ಲವು.

ಜಪಾನ್ ದೇಶವು ಚಿಕ್ಕದಾದರೂ ಮುಂದರಿದ ರಾಷ್ಟ್ರ. ಅವರ ಕುಶಲ ಕಲೆ ಹಾಗೂ ಕೈಗಾರಿಕಾ ವಸ್ತುಗಳು ಜಗತ್ತಿನ ಎಲ್ಲಾ ದೇಶಗಳ ಮಾರುಕಟ್ಟೆಗಳಲ್ಲೂ ಕಾಣಸಿಗುತ್ತವೆ. ಅಲ್ಲಿ ಮಕ್ಕಳಿಗೆ ಚಿತ್ರಕಲೆಯ ಉಪಕರಣಗಳನ್ನು ಸರಕಾರದವರು ಉಚಿತವಾಗಿ ಹಂಚುತ್ತಾರೆ. ಇದು ಆದರ್ಶ ಅನುಕರಣೀಯ ವಿಚಾರವಾಗಿದೆ.

## ಶಿಶುಚಿತ್ರ ಕಲೆಯ ಜನಕ ಪ್ರೊ. ಸಿಜೆಕ್

'Rejected' ನಿರಾಕರಿಸಲಾಗಿದೆ.

ಸಿಜೆಕನ ಅರ್ಜಿಗೆ ಸರಕಾರದಿಂದ ಬಂದ ಜವಾಬು ಇದು. ಸುಮಾರು ೭೫ ವರುಷಗಳ ಹಿಂದಿನ ಕತೆ. ಆ ಕಾಲದಲ್ಲಿ ಆತನ ಭಾವನೆಗಳು ಗ್ರಾಹ್ಯವಾಗಿರಲಿಲ್ಲ. ಈಗ ಆತನ ಕಲಾಶಿಕ್ಷಣ ವಿಧಾನವು ಅಂತರರಾಷ್ಟ್ರೀಯ ಕ್ರಾಂತಿ ಸ್ವರೂಪ ತಾಳಿದೆ. ಅವನೀಗ ಶಿಶುಚಿತ್ರಕಲೆಯ ಜನಕನೆನಿಸಿಕೊಂಡಿದ್ದಾನೆ.

## ಹೊಸಲೋಕ

ಆತನ ಪೂರ್ಣ ಹೆಸರು ಫ್ರಾನ್ಸ್ ಸಿಜೆಕ್. ಆಸ್ಟ್ರಿಯಾ ದೇಶದವನು. ೧೮೬೫ ರಲ್ಲಿ ಬೊಹೆಮಿಯಾ ಪಟ್ಟಣದಲ್ಲಿ ಜನಿಸಿದ. ತನ್ನ ೨೦ನೇ ವಯಸ್ಸು ಪ್ರಾಯದಲ್ಲಿ ವಿಯೆನ್ನಾಕ್ಕೆ ಬಂದ ಆತನು ವರ್ಣಚಿತ್ರಗಳನ್ನು ರಚಿಸುವಾಗ ಚಿಕ್ಕಮಕ್ಕಳು ಬಂದು ಸುತ್ತಲೂ ನಿಂತು ನೋಡುತ್ತಿದ್ದರು. ಆತನಿಗೆ ಮಕ್ಕಳಮೇಲೆ ಭಾರೀ ಮಮತೆ. ಮುತ್ತಿಗೆ ಹಾಕಿ ನಿಂತು ನೋಡುತ್ತಿದ್ದ ಅವರನ್ನು ಓಡಿಸುತ್ತಿರಲಿಲ್ಲ. ಅವರಿಗೆ ಕೂಡ ವರ್ಣಚಿತ್ರ ಮಾಡುವ ಆಶೆ ಆದುದರಿಂದ ಅವರಿಗಾಗಿ ಕಾಗದ ಬಣ್ಣಗಳನ್ನು ತರಿಸಿಕೊಡುತ್ತಿದ್ದ. ಮಕ್ಕಳು ಮನಸ್ಸಿಗೆ ಬಂದಂತೆ ಚಿತ್ರರಚಿಸಿ ಸಂತೋಷಪಟ್ಟರು. ಹಲವರಿಗೆ ಆ ಕಾರ್ಯವು ಕಾಗದ, ಬಣ್ಣ ವ್ಯರ್ಥವಾಡಿದುದು ಎಂದು ಎನಿಸಿರಬಹುದು. ಆದರೆ ಸಿಜೆಕನಿಗೆ ಅವರ ಚಿತ್ರಗಳಲ್ಲಿ ಹೊಸ ಲೋಕವನ್ನು ಕಂಡಂತಾಯಿತು. ಅಂತಹ ಕಲಾತರಗತಿಯೊಂದನ್ನು ತೆರೆಯುವ ಯೋಚನೆ ಹುಟ್ಟಿತು. ತಾನು ಆರಂಭಿಸುವ ಆ ತರಗತಿಗಾಗಿ ಮನ್ನಣೆ ಮತ್ತು ಸಹಾಯಧನ ನೀಡಬೇಕೆಂದು ಸರಕಾರಕ್ಕೆ ಮನವಿಪತ್ರ ಕಳುಹಿದ. ತತ್ಸಂಬಂಧ ಅನುಭವಿ ಅಧ್ಯಾಪಕರ ಯೋಗ್ಯತೆ ಮತ್ತು ವಿವರ, ಹಾಗೂ ಅನುಸರಿಸುವ ಪಾಠಪಟ್ಟಿಗಳನ್ನು ಕೇಳಿದರು. ಏನು ಉತ್ತರ ಕೊಡಲು ಸಾಧ್ಯ? ಆತನು ವೃತ್ತಿಯಿಂದ ಅಧ್ಯಾಪಕನಲ್ಲ. ಪಾಠಪಟ್ಟಿ ಪಾಠಕ್ರಮ ಸಮಯ ಸಂದರ್ಭಾನುಸಾರ ನಿಶ್ಚಯಿಸುವನು. ಆದುದರಿಂದ ಸಿಜೆಕನು "ಮಗುವನ್ನು ನಿರಾತಂಕವಾಗಿ ಬೆಳೆಯಬಿಡುವುದು." ಎಂಬ ಅಮೂಲ್ಯ ವಾಕ್ಯವನ್ನು ಬರೆದು ಕಳುಹಿದ. ಆ ಜವಾಬು ಅಧಿಕಾರಿಗಳ ಮನಸ್ಸಿಗೆ ಹಿಡಿಯಲಿಲ್ಲ. ಕರಿಹಲಗೆಯ ಮೇಲೆ ಚಿತ್ರ ಬಿಡಿಸುವುದು, ಮಕ್ಕಳಿಂದ ನಕಲು ತೆಗೆಯಿಸುವುದು ಅಥವಾ

ಎದುರಿನಲ್ಲಿ ವಸ್ತುಗಳನ್ನಿಟ್ಟು ಚಿತ್ರಮಾಡಿಸುವುದು, ವ್ಯತ್ಯಾಸ ವಾದಲ್ಲಿ ತಿದ್ದಿಕೊಡುವುದು, ಇದೇ ಆ ಕಾಲದ ಚಿತ್ರಪಾಠ ವಾಗಿತ್ತು. ಸಿಜೆಕನ ವಿಚಾರ ಧಾರೆಯು ಇದಕ್ಕೆ ವ್ಯತಿರಿಕ್ತ ವಾಗಿತ್ತು. ಆದಕಾರಣ ಆತನ ಅರ್ಜಿಗೆ ಸರಕಾರ ನೀಡಿದ ಉತ್ತರ, " ನಿರಾಕರಿಸಲಾಗಿದೆ, Rejected "

## ಅಪ್ರತ್ಯಕ್ಷ ಆಶೀರ್ವಾದ

ಸಿಜೆಕನು ನಿರಾಶನಾಗಲಿಲ್ಲ. ಆತ್ಮವಿಶ್ವಾಸದಿಂದ ಮಿತ್ರರ ಉತ್ತೇಜನದಿಂದ ಕಲಾತರಗತಿಯನ್ನು ಪ್ರಾರಂಭಿಸಿದ. ಅನಂತರ ೧೮೯೭ ರಲ್ಲಿ ಸರಕಾರವು ಪರ್ಯಾಲೋಚಿಸಿ ತಾತ್ಕಾಲಿಕವಾಗಿ ಮಂಜೂರಾತಿಯನ್ನಿತ್ತಿತು. ಆತನ ಈ ಖಾಸಗಿ ಉದ್ಯಮವು ತಜ್ಞರ ಮೆಚ್ಚುಗೆ ಪಡೆಯತೊಡಗಿತು. ಕಲಾತರಗತಿಯನ್ನು ನಡೆಯಿಸಲು ಸರಕಾರವು ೧೯೦೩ ರಲ್ಲಿ ಕೋಣೆಗಳನ್ನು ಕೊಟ್ಟಿತು. ಸರಕಾರದಿಂದ ದೊರೆತ ನೆರವು ಅದುಮಾತ್ರ. ಅಧಿಕ ಸಹಾಯ ದೊರಕದುದು ಒಂದು ಬಗೆಯಿಂದ ಆಶಿರ್ವಾದವಾಯಿತೆಂದೇ ಹೇಳ ಬೇಕು. ಏಕೆಂದರೆ ಹೆಚ್ಚಿಗೆ ನೆರವನ್ನು ಪಡೆದಿದ್ದರೆ ಇಲಾಖೆಯ ಪಾಠಪಟ್ಟಿಯನ್ನು ಅನುಸರಿಸಲು ಅವನು ಬದ್ಧನಾಗುತ್ತಿದ್ದನು ಅವರು ಹಾಗೆ ನೆರವು ನೀಡದ ಕಾರಣ ಕಲಾಶಿಕ್ಷಣ ಪ್ರಯೋಗ ತನ್ನಿಚ್ಛೆಬಂದಂತೆ ನಡೆಯಿಸಬಲ್ಲವನಾದನು.

ದಿನ ಕಳೆದಂತೆ ಮಕ್ಕಳ ಚಿತ್ರರಚನೆಗಳಲ್ಲಿ ಆತನಿಗೆ ಆಸಕ್ತಿ ಹೆಚ್ಚಿತು. ಅದೇ ಅವನಿಗೆ ಜೀವನದ ಧ್ಯೇಯವಾಯಿತು. " ನಾಡಿನಲ್ಲಿ ಅನೇಕಮಂದಿ ಕಲಾವಿದರಿದ್ದಾರೆ; ಚಿತ್ರಕೃತಿಗಳನ್ನು ರಚಿಸುತ್ತಾರೆ. ಆದರೆ ಕಲಾಶಿಕ್ಷಣದ ಮೂಲಕ ಮಕ್ಕಳನ್ನು ಬೆಳೆಯಗೊಡುವವರು ಇಲ್ಲ. ಅದು ನನ್ನ ಕೊನೆಯ ಸಾಧನೆ ಯಾಗಲಿ, " ಎಂದು ಸಂಕಲ್ಪಮಾಡಿದ. ತನ್ನ ಎಲ್ಲಾ ಸಮಯ

ವನ್ನು ಆದಕ್ಕಾಗಿ ಧಾರೆಯೆರೆದು ಕೊನೆಯ ಮುವ್ವತ್ತು ವರ್ಷಗಳಲ್ಲಿ ತಾನು ಸ್ವಂತ ಚಿತ್ರರಚಿಸಲು ಕುಂಚವನ್ನೇ ಹಿಡಿಯಲಿಲ್ಲ. ತಾನು ಚಿತ್ರಿಸುವುದಕ್ಕಿಂತ ಮಕ್ಕಳು ಕಲಾರಚನೆ ಮಾಡುವಂತೆ ನೋಡುವುದು ಹೆಚ್ಚು ಪ್ರಾಮುಖ್ಯವಾದುದು ಎಂದು ಭಾವಿಸಿದ.

**ಸಿಜೆಕನ ಕಲಾತರಗತಿ**

ಸಿಜೆಕನು ಮಕ್ಕಳ ವಯಸ್ಸನ್ನು ನೋಡಿ ವರ್ಗೀಕರಿಸುತ್ತಿರಲಿಲ್ಲ ಕಲ್ಪಿಸಿ ಚಿತ್ರ ರಚಿಸತಕ್ಕವರದೊಂದು, ನೈಜರೂಪ ಚಿತ್ರಿಸುವುದರದೊಂದು ಹೀಗೆ ಎರಡು ವರ್ಗಮಾಡುತ್ತಿದ್ದನು. ·ತರಗತಿ ಕೋಣೆಯ ಗೋಡೆಗಳು ಮಕ್ಕಳ ಚಿತ್ರಗಳಿಂದ ತುಂಬಿದ್ದುವು. ಆದರೆ ಮಕ್ಕಳು ಅವುಗಳನ್ನು ;ನೋಡಿ ನಕಲು ತೆಗೆಯುತ್ತಿರಲಿಲ್ಲ. " ಗೋಡೆಯ ಮೇಲೆಲ್ಲಾ ನಮ್ಮ ಚಿತ್ರಗಳಿವೆ," ಎಂಬ ಆನಂದ ಅವರಿಗಿರುತ್ತಿತ್ತು ಒಂದೇ ದೊಡ್ಡ ಹಲಗೆಯಮೇಲೆ ಎರಡು ಕಾಗದಗಳನ್ನಿಟ್ಟು ಇಬ್ಬರು ಚಿತ್ರವನ್ನು ಮಾಡುತ್ತಿದ್ದರು. ಆದರೆ ಒಬ್ಬನ ಚಿತ್ರವನ್ನು ಇನ್ನೊಂದು ಮಗುವು ನೋಡುತ್ತಿರಲಿಲ್ಲ. ಅನನ್ಯ ಮನಸ್ಕರಾಗಿ ತಮ್ಮ ಚಿತ್ರರಚನೆಗಳಲ್ಲಿ ಮಗ್ನರಾಗುತ್ತಿದ್ದರು. ಉತ್ತಮವಲ್ಲದ ಚಿತ್ರವನ್ನು ರಚಿಸಿದ ಮಗುವಿಗೆ ಅದು ಹಾಳಾಗಿದೆ ಎಂದು ಹೇಳಿ ಅದರ ಮನಸ್ಸು ನೋಯಿಸುತ್ತಿರಲಿಲ್ಲ. ಆತನ ಕಲಾತರಗತಿ ಒಂದು ಉದ್ಯಾನದ ಹಾಗಿತ್ತು. ಪುಷ್ಪೋದ್ಯಾನದಲ್ಲಿ ನಾನಾ ತರದ ಹೂಗಿಡಗಳು ಇರುತ್ತವೆ. ಎಲ್ಲಾ ಕಡೆ ಇರುವ ಒಂದು ಚೈತನ್ಯ ಶಕ್ತಿಯ ದೆಸೆಯಿಂದ ಅಲ್ಲಿ ವಿಧವಿಧವಾದ ಸುಂದರ ಹೂಗಳು ಬೆಳೆದು ಅರಳುತ್ತವೆ. ಹಾಗೆ ಬೆಳೆಯಿಸಿ ಅರಳಿಸುವ ಅದೃಶ್ಯ ಶಕ್ತಿಯಂತೆ ಇಲ್ಲಿ ತರಗತಿಯಲ್ಲಿ ಸಿಜೆಕನು ತಿರುಗಾಡುತ್ತಾ ವಿವಿಧ ವಿಚಿತ್ರ ರಚನೆಗಳನ್ನು ಅರ್ಥಮಾಡಿ ಪ್ರಶಂಸಿಸುತ್ತಾ ಮಕ್ಕಳನ್ನು ಬೆಳೆಯಗೊಡುವ ಪ್ರೇರಕ ಶಕ್ತಿಯಾಗಿದ್ದನು.

**ಬೋಧನಾಕ್ರಮ**—ಚಿತ್ರಿಸಲು ತರಗತಿಯಲ್ಲಿ ಮಾದರಿಗಳು [Models] ಇರುತ್ತಿರಲಿಲ್ಲ. ಮಕ್ಕಳೊಡನೆ ಆಯಾದಿನದ ವಿಶೇಷ ವಿಚಾರ, ಸಮಾಚಾರಗಳ ಕುರಿತು ಸರಸವಾದ ಮಾತುಕತೆ ಇತಿಹಾಸ, ಕಥೆಹೇಳುವುದು, ಕೇಳುವುದು, ಜಾತ್ರೆ ಹಬ್ಬಗಳ ಕುರಿತು ಸಂಭಾಷಣೆ, ಪ್ರಮುಖರು ಭೇಟಿಕೊಟ್ಟುದನ್ನೂ ವಿಶೇಷ ಘಟನೆಗಳನ್ನೂ ಕುರಿತು ಸಂವಾದ, ಇದು ಸಿಜೆಕನ ಪಾಠಾರಂಭದ ಕ್ರಮ ಅನಂತರ ಆ ಮಾತುಕತೆಯ ಒಂದು ವಿಷಯವನ್ನೇ ಮಕ್ಕಳು ಕಲ್ಪನೆಯಿಂದ ಚಿತ್ರಿಸುತ್ತಿದ್ದರು. ಕಲ್ಪನೆಗೆ ಆದ್ಯತೆ ನೀಡುವುದು ಅವನ ಉದ್ದೇಶ.

ಒಮ್ಮೆ ಸಿಜೆಕನ ವಿದ್ಯಾರ್ಥಿಗಳು ಸರ್ಕಸ್ ನೋಡಲು ಹೋಗಿದ್ದರು. ಆದುದರಿಂದ ಮಾರನೆಯ ದಿನದ ಕಲಾತರಗತಿಯಲ್ಲಿ ಚಿತ್ರಣದ ವಿಷಯ ಸರ್ಕಸ್ಸು ಆಗಿತ್ತು. ಒಬ್ಬ ಚಿಕ್ಕ ಹುಡುಗಿಯು ಸರ್ಕಸ್ಸಿನ ಆನೆಯನ್ನು ನೋಡಿದ್ದಳು. ಅದನ್ನು ಚಿತ್ರಿಸಿ ಅದಕ್ಕೆ ನೇರಳೆ ಬಣ್ಣ ಹಾಕಿದಳು. ಸಿಜೆಕನು ಸಮಯೋಚಿತ ಮಾತಿನಿಂದ "ಆನೆಗೆ ಆ ಬಣ್ಣ ಹಾಕಿದುದು ಏಕೆ ?" ಎಂದು ಪ್ರಶ್ನಿಸಿದ. ಬಾಲಕಿಯ ಜವಾಬು "ಆನೆಯು ಹೊರನಾಡಿನಿಂದ ಬಂದ ದೊಡ್ಡ ಪ್ರಾಣಿ. ಅದಕ್ಕೆ ಸಪ್ಪೆಯಾದ ಬೂದು ಬಣ್ಣ ಸಾಲದು. ಈ ಅಬ್ಬರದ ಕೆಂಪು ನೀಲಿ ಬಣ್ಣ ಬೇಕು."

ಒಮ್ಮೆ ಒಂದು ಮಗುವು ಆಯತಾಕಾರದ ಮೇಲೆ ತ್ರಿಕೋನ ಎಳೆದು ಮನೆಯ ಚಿತ್ರ ರಚಿಸಿತು. ಸಿಜೆಕನು ಅದನ್ನು ಮೆಚ್ಚಿ ಪ್ರಶಂಸಿಸಿದ. ಅದಕ್ಕೆ ಆ ಮಗುವು "ಇದನ್ನು ನೀವು ಮೆಚ್ಚುತ್ತೀರಿ. ಈ ಚಿತ್ರವು ತಪ್ಪು ಎಂದು ನನ್ನ ಹಿರಿಯರು ಹೇಳುತ್ತಾರೆ. ಏಕೆಂದರೆ ಮಾಡು ಗೋಡೆಗಿಂತ ಮುಂದಕ್ಕೆ ಇರಬೇಕಂತೆ. ಇಲ್ಲ ವಾದರೆ ಮಳೆನೀರು ಗೋಡೆಮೇಲೆ ಇಳಿದು ಮನೆ ಕುಸಿದು ಬೀಳುತ್ತ

ದಂತೆ" ಎಂದು ಹೇಳಿತು. ಆದರೆ ತುಸು ಹೊತ್ತಿನಲ್ಲಿ ಆ ಮಗುವು ನಕ್ಕಿತು. ಸಿಜೆಕನು ನಗುವಿನ ಕಾರಣ ಪ್ರಶ್ನಿಸಿದ. ಮಗುವಿನ ಜವಾಬು: "ನನ್ನ ಚಿತ್ರದಮೇಲೆ ಮಳೆಬರುವುದೂ ಇಲ್ಲ; ಈ ಗೋಡೆ ಕುಸಿಯುವುದೂ ಇಲ್ಲ." ಮಾಡು ಗೋಡೆಗಿಂತ ಮುಂದಕ್ಕೆ ನೀಡಿರ ಬೇಕೆನ್ನುವುದು ಭೌತ ಶಾಸ್ತ್ರ. ಮಗು ರಚಿಸಿದ್ದು ಕಲೆ, ಅವೆರಡೂ ಬೇರೆಬೇರೆ. ಸೊಗಸಾಗಿ ಮಾಡಿದ್ದೇ ಕಲೆ. ಆತನ ಕಲಾತರಗತಿ ಯಲ್ಲಿ ಚಿತ್ರ ರಚನೆಗಾಗಿ ವಸ್ತುಗಳ ಸಂಗ್ರಹ ಇಲ್ಲ. ಸೃಜನಾತ್ಮಕ ಗುಣವು [Creative faculty] ನಶಿಸಿದ ನಂತರ ವಸ್ತು ಚಿತ್ರ ಗಳಿಗೆ ಅವಕಾಶ ನೀಡಬೇಕೆಂದು ಹೇಳುತ್ತಿದ್ದನು.

ಈ ಕಲಾಶಿಕ್ಷಣ ವಿಧಾನವು ಹಿಂದಿನ ಪದ್ಧತಿಗಿಂತ ಸುಖಕರ ವೆಂದು ಕೆಲವರು ಭಾವಿಸಬಹುದು. ಅದುತಪ್ಪು. ಐವತ್ತು ವರ್ಷಕಾಲ ಈ ಕಾರ್ಯದಲ್ಲಿ ನುರಿತ ಸಿಜೆಕನಿಗೆ ಕೂಡ ಈ ತೆರನಾಗಿ ಒಂದೆರಡು ತಾಸು ತರಗತಿಯನ್ನು ನಡೆಯಿಸುವುದು ದಣಿವನ್ನುಂಟು ಮಾಡುತ್ತಿತ್ತು. ಸಿಜೆಕನು ಶಿಕ್ಷಕನಂತಿರದೆ ಮಕ್ಕಳ ಮುಂದೆ ತಾನೂ ಒಬ್ಬ ಮಗುವಿನಂತಿರುತ್ತಿದ್ದ.

### ಆತನ ಉದ್ದೇಶ

ಚಿತ್ರಕಲಾವಿದರಾಗಲು ತರಬೇತುಗೊಳಿಸುವುದು ಆತನ ಕಲಾ ತರಗತಿಯ ಉದ್ದೇಶವಲ್ಲ. "ಅದು ಸಾಧ್ಯವೂ ಅಲ್ಲ. ಕಲಾ ವಿದರು ಹುಟ್ಟು ಪ್ರತಿಭೆ ಉಳ್ಳವರು" ಎಂದು ಆತನ ಮತ. ಆತನ ವಿದ್ಯಾರ್ಥಿಗಳಲ್ಲಿ ಚಿತ್ರಕಲಾವಿದರಾಗಿ ಜೀವನ ನಡೆಸಿದವರು ತೀರಾ ಕಡಮೆ. ಹೆಚ್ಚಿನವರು ತಾವು ಉದ್ಯೋಗ ವಹಿಸಿದ ಕ್ಷೇತ್ರವಲ್ಲಿ ಸ್ವಬುದ್ಧಿಶಕ್ತಿಯಿಂದ ರಚನಾತ್ಮಕ ಹೊಸತನವನ್ನು ಆರಂಭಿಸ ಬಲ್ಲವರಾದರು. ಇದೇ ಆತನ ಉದ್ದೇಶವಾಗಿತ್ತು.

## ವಿದೇಶ ಮನ್ನಣೆ

ಸಿಜೆಕನ ತರಗತಿಯನ್ನು ನೋಡಲು ಪ್ರತಿವರುಷವೂ ವಿದೇಶಗಳಿಂದ ಸಾವಿರಾರು ಮಂದಿ ವಿಯೆನ್ನಾಕ್ಕೆ ಬಂದರು. ಅವರಲ್ಲಿ ಹೆಚ್ಚಿನವರು ಬ್ರಿಟನ್ ಮತ್ತು ಅಮೇರಿಕಾದವರು. ಆತನು ತನ್ನ ನಾಡಿನಲ್ಲಿ ಗಣ್ಯನಾಗಲಿಲ್ಲ. ಆದರೆ ಇಂಗ್ಲೆಂಡಿನ ಜನರಿಗೆ ಆತನ ಹೆಸರು ಮನೆ ಮಾತಾಗಿತ್ತು; ರವೀಂದ್ರನಾಥ ಟಾಗೂರರು ಅಲ್ಲಿಗೆ ಭೇಟಿಕೊಟ್ಟಿದ್ದರು. ಆತನ ಕಲಾತರಗತಿ ಕುರಿತು ಕವಿತೆ ಬರೆದಿದ್ದರು. ಭಾರತದ ಅನೇಕ ರಾಜರು ಆವನ ತರಗತಿಗಳನ್ನು ಸಂದರ್ಶಿಸಿದ್ದರು. ಅವರು ಅಲ್ಲಿಂದ ನಿರ್ಗಮಿಸಿದ್ದನಂತರ ಸಿಜೆಕನು ಮಕ್ಕಳೊಡನೆ ಮೆಲ್ಲನೆ ಮಾತನಾಡಿ ಆ ಮಹಾನುಭಾವರ ಸಂದರ್ಶನಗಳ ಚಿತ್ರಗಳನ್ನು ಮಕ್ಕಳಿಂದ ರಚನೆ ಮಾಡಿಸುತ್ತಿದ್ದನಂತೆ.

**ಪೋಷಕರು ಮತ್ತು ಸಿಜೆಕ್:** 'ವಯಸ್ಕರ ಪ್ರವೇಶವನ್ನು ನಿಷೇಧಿಸಲಾಗಿದೆ.' ಎಂಬುದು ಆತನ ತರಗತಿಯಲ್ಲೊಂದು ನಿಯಮ. ಇದರ ಅರ್ಥ ಹಿರಿಯರು ಅಲ್ಲಿ ಒಳಕ್ಕೆ ಬರಬಾರದೆಂಬುದಾಗಿ ಅಲ್ಲ, ತರಗತಿಗೆ ಮಕ್ಕಳನ್ನು ಕರೆತರಲು ಮತ್ತು ಅಲ್ಲಿಂದ ಮನೆಗೆ ಕರೆದುಕೊಂಡು ಹೋಗಲು ಹೆತ್ತವರು ಅನೇಕರು ಬರುತ್ತಿದ್ದುದುಂಟು. ನಡೆಯುತ್ತಿದ್ದ ತರಗತಿಯನ್ನು ನೋಡಲು ಸಿಜೆಕ್ ಅವರನ್ನು ಒಳಗೆ ಕರೆಯುತ್ತಿದ್ದ. ಆದರೆ ಅವನು ಅಲ್ಲಿ ಹಿಂದೆ ನಿಂತು ನೋಡುತ್ತಿರಬೇಕು. 'ಹೆತ್ತವರಿಗೆ ಈ ಅನುಭವ ಅಗತ್ಯ' ಎಂದು ಆತನ ಮತ. ಏಕೆಂದರೆ ಇಲ್ಲಿಯ ಶಿಕ್ಷಣ ವಿಧಾನವನ್ನು ಅರಿಯದೆ ಹೆತ್ತವರು ಮನೆಯಿಂದ ಮಕ್ಕಳಲ್ಲಿ ಚಿತ್ರಗಳ ನಕಲು ತೆಗೆಯಿಸುವುದಾದರೆ ಇಲ್ಲಿ ನಡೆದ ಪಾಠವು ವಿಫಲವಾಗುತ್ತದೆಂಬುದು ಅವನ ನಂಬಿಕೆ.

**ಧನಾಭಾವ-ದುಃಸ್ಥಿತಿ**

೧೯೨೦ ರ ಸುಮಾರಿಗೆ ತೀವ್ರವಾದ ಧನಾಭಾವದಿಂದ ಸಿಜೆಕ್ ಕಲಾತರಗತಿಯನ್ನು ಮುಚ್ಚಬೇಕಾದ ದುಃಸ್ಥಿತಿ ಬಂತು. ಆಗ ಮಕ್ಕಳ ನಿಧಿಗಾಗಿ ಉಳಿತಾಯ ಯೋಜನಾ ಸಮಿತಿಯೊಂದರ ಆಶ್ರಯದಲ್ಲಿ ವಿಲ್ಸನ್ ಮತ್ತು ಹಾಕರ್ ಎಂಬುವರು ಇಂಗ್ಲೆಂಡಿನಲ್ಲಿ ಸಿಜೆಕ್‌ನ ಚಿತ್ರಕಲೆಯ ಪ್ರದರ್ಶನಗಳನ್ನೇರ್ಪಡಿಸಿದರು. ಅದರಿಂದ ಹಣ ಒದಗಿದುದಲ್ಲದೆ ಆತನ ಆದರ್ಶಕಾರ್ಯವು ಬ್ರಿಟಿಷ್ ಜನರ ಮನಸ್ಸನ್ನು ಸೂರೆಗೊಂಡಿತು. ಪ್ಯಾರಿಸ್ಸಿನಲ್ಲೂ ಈ ಮಕ್ಕಳ ಚಿತ್ರಕಲಾಪ್ರದರ್ಶನವು ನಡೆಯಿತು. ಈ ಮಹತ್ಕಾರ್ಯಕ್ಕಾಗಿ ಬಂಗಾರದ ಪದಕಗಳು ದೊರೆತುವು.

ಸಿಜೆಕನ ಅಭಿಮಾನಿಯಾದ ವಿಲ್ಸನನು ಒಮ್ಮೆ ಕೇಳಿದನು.

‘ ಮಕ್ಕಳಿಂದ ಚಿತ್ರ ಹೇಗೆ ಮಾಡಿಸುತ್ತೀರಿ ? ’

ಸಿಜೆಕ್ ಹೇಳಿದ “ ನಾನು ಮಾಡಿಸುವುದಿಲ್ಲ, ಕೃತಿ ರಚಿಸಲು ಅವುಗೆ ಅವಕಾಶ ಕಲ್ಪಿಸಿಕೊಡುತ್ತೇನೆ. ಸಾಮಾನ್ಯವಾಗಿ ಜನರು ಮಕ್ಕಳಿಗೆ ಅಂತಹ ಅವಕಾಶಕ್ಕೆ ಪ್ರತಿಬಂಧ ಹಾಕುತ್ತಾರೆ. ನನಗೂ ಇತರರಿಗೂ ಅಷ್ಟೇ ವ್ಯತ್ಯಾಸ ”

“ ಮಕ್ಕಳಿಗೆ ಮಾರ್ಗದರ್ಶನ ಬೇಡವೇ ? ತಪ್ಪುಗಳನ್ನು ತಿಳಿಸಿ ತಿದ್ದಿ ಕಲಿಸಬೇಡವೇ ? ”

“ ಬೇಡ, ಮಕ್ಕಳಿಗೆ ಚಿತ್ರದ ಮೂಲಕ ಭಾವ ಪ್ರಕಟಣೆಗೆ ತಮ್ಮದೇ ಆದ ರೀತಿ ನಿಯಮಗಳಿವೆ. ನಾವು ತಿದ್ದಿಕೊಟ್ಟರೆ ಅದು ಕೃತಕವಾಗುತ್ತದೆ. ”

“ ಅವರು ನಿಸರ್ಗವನ್ನು ಯಥಾರೂಪವಾಗಿ ಚಿತ್ರಿಸಬಲ್ಲರೇ ? ”

“ ನಮಗೆ ಬೇಕಾದುದು ಕಲೆ; ನಿಸರ್ಗವಲ್ಲ; ಕಲೆ ಎಂದರೆ ಹೊಸ ಸೃಷ್ಟಿ. ಕಲೆಯು ಜೀವನವನ್ನು ರೂಪಿಸುವಂಥಾದ್ದು. ”

“ ಯಾವ ವಯಸ್ಸಿನ ಮಕ್ಕಳಿಂದ ಅತ್ಯಂತ ಸತ್ವಭರಿತ ಕಲೆಯು ರಚಿತವಾಗುತ್ತದೆ ? ”

“ ವಯಸ್ಸನ್ನು ಹೇಳಲಾಗುವುದಿಲ್ಲ. ಸಾಮಾನ್ಯವಾಗಿ, ಮೂರು ಅಥವಾ ನಾಲ್ಕು ವರುಷ ವಯಸ್ಸಿನ ಮಕ್ಕಳಿಂದ ಸತ್ವಭರಿತ ಕಲೆಯು ರಚಿತವಾಗುತ್ತದೆ. ”

“ ಮಕ್ಕಳನ್ನು ವಯಸ್ಕರ ನಿರ್ಬಂಧದಿಂದ ಮುಕ್ತಿಗೊಳಿಸಿದೆ. ಮಕ್ಕಳ ಪ್ರಪಂಚದಲ್ಲಿ ವಯಸ್ಕರಿಗೆ ಪ್ರವೇಶವನ್ನು ನಿಷೇಧಿಸಿ ಅವರನ್ನು ದೂರವಿರಿಸಿದೆ. ಮಕ್ಕಳೇ; ನೀವು ರಚಿಸಿವುದು ಉತ್ತಮ ವಾದುದು ಎಂದು ಹೇಳಿದೆ. ಈ ಹಿಂದೆ ಮಕ್ಕಳ ಚಿತ್ರಗಳನ್ನು ನೋಡಿ ಹಿರಿಯರು ನಗಾಡುತ್ತಿದ್ದರು; ದೂಷಿಸುತ್ತಿದ್ದರು. ಈ ಹಿಂಸೆಯಿಂದ ಅವರನ್ನು ಪಾರುಮಾಡಿದೆ. ಮಕ್ಕಳಲ್ಲಿರುವ ರಚನಾತ್ಮಕ ಗುಣವನ್ನು ಅಣಗಿಸಬಾರದಾಗಿ ಹೇಳಿದೆ. ” ತಾನು ಮಾಡಿ ದುದನ್ನು ಸಿಜೆಕ್ ಹೆಮ್ಮೆಯಿಂದ ಬಣ್ಣಿಸುವ ರೀತಿ ಇದು.

ಚಿತ್ರಿಸುವಿಕೆಯಲ್ಲಿ ರೋಗ ನಿವಾರಣಾ ಗುಣವೂ ಇರುತ್ತದೆ. ಆಸ್ಪತ್ರೆಯಲ್ಲಿ ರೋಗಪೀಡಿತ ಮಕ್ಕಳಿಗೆ ವರ್ಣಚಿತ್ರ ರಚಿಸಲು ಉತ್ತೇಜನ ಕೊಟ್ಟುದರಿಂದ ಅವರ ಆರೋಗ್ಯವು ಬೇಗ ಸುಧಾರಿಸಿ ದ್ದುಂಟು ಎಂದು ಡಾಕ್ಟರರು ಸಿಜೆಕನಿಗೆ ಹೇಳಿದ್ದರಂತೆ.

## ಕೊನೆಯ ದಿನಗಳು

ಮಕ್ಕಳಿಂದ ಆತನು ಹಣ ಪಡೆಯುತ್ತಿರಲಿಲ್ಲ. ಶ್ರೀಮಂತರ ಮಕ್ಕಳು ಮಾತ್ರ ಸ್ವಲ್ಪ ಹಣ ಕೊಡುತ್ತಿದ್ದರು. ಆದರೆ ವೆಚ್ಚವು ಅದರ ಹತ್ತುಪಾಲು ಹೆಚ್ಚು ಆಗುತ್ತಿತ್ತು. ಆತನ ಕಲಾಶಿಕ್ಷಣ ವಿಧಾನ ಕೆಲವರಿಗೆ ಹಿಡಿಸಲಿಲ್ಲ. ನಗರ ಸಭೆಯವರು ನೀಡುತ್ತಿದ್ದ ಸ್ವಲ್ಪ ಸಹಾಯಧನವನ್ನು ಲೋಪ ಮಾಡತೊಡಗಿದರು. ಆದರೆ ಸಂಶೋಧನಾ ಕಾರ್ಯಕ್ಕೆ ಸಾಧನವಾಗಿ ಒಂದು ಆದರ್ಶಕ್ಕಾಗಿ

ಆ ಶಾಲೆಯನ್ನು ಕಷ್ಟದಿಂದ ಅವನು ನಡೆಸಿಕೊಂಡು ಬಂದಿದ್ದ.

ಅನಂತರ ಶಿಶುಚಿತ್ರ ಕಲೆಯ ಬಗ್ಗೆ ಅನೇಕ ಮಂದಿ ಮನಶ್ಶಾಸ್ತ್ರಜ್ಞರು ಆಸಕ್ತಿ ವಹಿಸಿದ್ದರು. ಸಿಜೆಕನ ತತ್ವಗಳು ಸತ್ಯವಾದುವೆಂದು ಸ್ಥಾಪನೆಯಾಯಿತು. ಹಳೇ ಸಂಪ್ರದಾಯಕ್ಕೆ ವಿರುದ್ಧವಾಗಿ ಹೊಸ ಪ್ರಯೋಗದಲ್ಲಿ ತೊಡಗಿದ ಪ್ರತಿಭಾವಂತರಿಗೆ ತಮ್ಮ ತಮ್ಮ ಜೀವಿತ ಕಾಲದಲ್ಲಿ ಕಷ್ಟ ಕಾರ್ಪಣ್ಯಗಳು ಸಂಭವಿಸಿರುವುದು ಪ್ರಪಂಚದ ಇತಿಹಾಸದಲ್ಲಿ ಸಾಮಾನ್ಯವಾಗಿದೆ. ಕೊನೆಗೂ ಸಿಜೆಕನ ಶೋಧನೆಯು ವಿಜಯ ಗಳಿಸಿತು. ಆದರೆ ಆತ ಮಾತ್ರ ಅತೀವ ಬಡವನಾಗಿಯೇ ಉಳಿದ. ಭಾನುವಾರ ಮಾತ್ರ ಹೊಟ್ಟೆ ತುಂಬಾ ಊಟ. ಕೊನೆಯ ದಿನಗಳಲ್ಲಿ ಕುರುಡುತನ ಬೇರೆ.

" ನೋಡಲು ಕನಿಕರವಾಗುತ್ತಿತ್ತು. " ಎಂದು ಅವನ ಅಭಿಮಾನಿಯೊಬ್ಬರು ೧೯೪೧ ರಲ್ಲಿ ತಮ್ಮ ಮಿತ್ರರಿಗೆ ಬರೆದ ಪತ್ರದಲ್ಲಿ ಕಣ್ಣೀರಿಟ್ಟಿದ್ದರು.



## ಸಂಧರ್ಭ ಗ್ರಂಥಗಳು:


1. Child Art ………Viol
2. Education Through Art………Herbert Rea